KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜೂನ್ ೧೧, ೨೦೦೯ (ಜೇಷ್ಠ ೨೧, ಶಕ ವರ್ಷ ೧೯೩೧) | ಸಂಚಿಕೆ ೨೪ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/344/ಡಿಟಿಸಿಆರ್/2006–07, ದಿನಾಂಕ:22ನೇ ಡಿಸೆಂಬರ್, 2008**

**ಉಪಸ್ಥಿತರು:** ನೂರ್‌ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಮಂಗಳೂರು.

**ಆರೋಪಿಗಳು:**
1) ಹರೀಶ್ ಬಿನ್ ಶೇಖರ, ಮಜಲ್‌ಹೌಸ್, ಹೊಸಂಗಡಿ, ಮಜೇಶ್ವರ, ಕಾಸರಗೋಡು, ಕೇರಳರಾಜ್ಯ ಹೊಸಂಗಡಿ, ಮಂಜೇಶ್ವರ, ಕಾಸರಗೋಡು, ಕೇರಳ ಮತ್ತು ಇತರ ಇರ್ವರು ಆರೋಪಿಗಳು.

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಮಂಗಳೂರು ಇವರು ದಿನಾಂಕ:14.06.2005 ರಂದು ಕಾರೊಂದರಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೇಟುಗಳನ್ನು ಕೇರಳ ರಾಜ್ಯಕ್ಕೆ ಸಾಗಾಟ ಮಾಡಲಾಗುತ್ತಿದೆ ಎಂದು ದೊರೆತ ಖಚಿತ ವರ್ತಮಾನದ ಮೇರೆಗೆ ಅಪರಾಹ್ನ 15–20 ಸಮಯಕ್ಕೆ ತಮ್ಮ ಸಿಬ್ಬಂದಿ ಮತ್ತು ಪಂಚರೊಂದಿಗೆ ಮಂಗಳೂರು ನಗರದ ಮಾರ್ಗನ್‌ಗೇಟ್ಸ್ ಬಳಿ ಮಹಾಕಾಳಿಪಡ್ಪು ಎಂಬಲ್ಲಿ ರೈಲ್ವೆ ಓವರ್ ಬ್ರಿಡ್ಜ್‌ನ ಮುಂಭಾಗದಲ್ಲಿ ರಸ್ತೆಗಾವಲು ಮಾಡುತ್ತಿರುವಾಗ, ಮಾಹಿತಿಯಂತೆ ಕೆಎ–19–ಎಂ–4629 ನಂಬರ್ ಪ್ಲೇಟು ಅಳವಡಿಸಲಾಗಿರುವ ಮಾರುತಿ 800 ಕಾರು ಬರುವುದನ್ನು ಗಮನಿಸಿ, ಸದರಿ ಕಾರನ್ನು ತಡೆದು ನಿಲ್ಲಿಸಿ, ಸಿಬ್ಬಂದಿಯವರು ಸುತ್ತುವರಿದು ಕಾರನ್ನು ಪರಿಶೀಲಿಸಿದಾಗ, ಕಾರಿನ ಒಳಗೆ ಒಬ್ಬ ವ್ಯಕ್ತಿ ಚಾಲಕನ ಸೀಟಿನಲ್ಲಿ ಕುಳಿತಿರುವುದು ಕಂಡುಬಂತು. ಆತನನ್ನು ವಿಚಾರಿಸಿದಾಗ ತನ್ನ ಹೆಸರು ಹರೀಶ್ ಬಿನ್ ಶೇಖರ್, ಮಜಲ್‌ಮನೆ, ಹೊಸಂಗಡಿ, ಮಂಜೇಶ್ವರ ಕೇರಳ ರಾಜ್ಯ ಎಂದು ತಿಳಿಸಿ ಸದರಿ ಸಾರಾಯಿ ಸಾಗಾಟದ ಬಗ್ಗೆ ಯಾವುದೇ ರಹದಾರಿ ಪತ್ರ ಇರುವುದಿಲ್ಲವೆಂದು, ಸಾರಾಯಿಯನ್ನು ಸುಧೀರ್‌ಯಾನೆ ಕಬ್ಬಡಿ ಅಲಿಯಾಸ್ ಎಂಬವರ ಮೂಲಕ ಎಸ್.ಜಿ.ಬಿ. ಗ್ರೂಪಿನ ಮ್ಯಾನೇಜರ್ ಆಗಿರುವ ಶಿವರಾಮ ಎಂಬ ವ್ಯಕ್ತಿಯು ಅಕ್ರಮವಾಗಿ ಕೇರಳ ರಾಜ್ಯಕ್ಕೆ ಸಾಗಾಟ ಮಾಡಲು ನೀಡಿರುವುದಾಗಿಯೂ ತಿಳಿಸಿರುತ್ತಾನೆ. ನಂತರ ಕಾರನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ಕಾರಿನ ಒಳಗಡೆ ಒಟ್ಟು 14 ಪ್ಲಾಸ್ಟಿಕ್ ಚೀಲಗಳಲ್ಲಿ ಸಾರಾಯಿ ತುಂಬಿಸಿರುವುದು ಕಂಡುಬಂದು, ಅವುಗಳನ್ನು ಬಿಚ್ಚಿನೋಡಲಾಗಿ ಅವುಗಳ ಪೈಕಿ 13 ಪ್ಲಾಸ್ಟಿಕ್ ಚೀಲಗಳಲ್ಲಿ 100 ಎಂಎಲ್‌ನ ತಲಾ 500 ಸ್ಯಾಚೇಟುಗಳಂತೆ ಒಟ್ಟು 6,500 ಸಾರಾಯಿ ಸ್ಯಾಚೇಟುಗಳು

ಮತ್ತು ಇನ್ನೊಂದು ಚೀಲದಲ್ಲಿ 400 ಸ್ಯಾಚೇಟುಗಳು ಇದ್ದು ಈ ರೀತಿಯಾಗಿ ಒಟ್ಟು 6,900 ಸಾರಾಯಿ ಸ್ಯಾಚೇಟುಗಳು ಮತ್ತು ವ್ಯಕ್ತಿಯ ಬಳಿ ನೋಕಿಯೋ ಕಂಪೆನಿ ಮೊಬೈಲ್ ಫೋನ್ ಇರುವುದನ್ನು ಪತ್ತೆ ಹಚ್ಚಿ, ಸದರಿ ಸಾರಾಯಿ ಸಾಗಾಟ ಮಾಡಲು ಯಾವುದೇ ದಾಖಲಾತಿಗಳು ಸದರಿ ಕಾರಿನಲ್ಲಿ ಪತ್ತೆಯಾಗದೇ ಇದ್ದು, ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದರಿ ಸೊತ್ತುಗಳನ್ನು ಪಂಚರ ಸಮಕ್ಷಮ ಜಪ್ತುಮಾಡಿ, ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ, ಕಾರಿನಲ್ಲಿದ್ದ ವ್ಯಕ್ತಿಗಳಾದ (1) ಹರೀಶ್ ಬಿನ್ ಶೇಖರ, ಮಜಲ್ ಹೌಸ್, ಹೊಸಂಗಡಿ ಮಂಜೇಶ್ವರ, ಕಾಸರಗೋಡು, ಕೇರಳ ರಾಜ್ಯ (2) ಸುಧೀರ್ ಅಲಿಯಾಸ್ ಕಬಡಿ ಸುಧೀರ್ (ವಿಳಾಸ ಪತ್ತೆಯಾಗಿಲ್ಲ) (3) ಶಿವರಾಮ (ವಿಳಾಸ ಪತ್ತೆಯಾಗಿಲ್ಲ) ಇವರುಗಳ ವಿರುದ್ಧ ತಕ್ಷೀರು ಸಂಖ್ಯೆ: 205/2005, ದಿನಾಂಕ:14.06.2005ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಮಾನ್ಯ ನ್ಯಾಯಾಲಯದ ಆದೇಶದ ಮೇರೆಗೆ ಸೊತ್ತು ಮತ್ತು ಕಡತವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸುವರೇ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಇವರು ಕೋರಿದ ಮೇರೆಗೆ, ಪ್ರಾಧಿಕಾರದ ದಿನಾಂಕ:25.10.2006ರ ಆದೇಶದಲ್ಲಿ ಸೊತ್ತುಗಳನ್ನು ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ಜಾರಿ ಮತ್ತು ತನಿಖೆ ಇವರಿಗೆ ಹಸ್ತಾಂತರಿಸಲು ಆದೇಶಿಸಲಾಗಿರುತ್ತದೆ. ಆ ಪ್ರಕಾರ ಮೊಕದ್ದಮೆಗೆ ಸಂಬಂಧಿಸಿ ಸೊತ್ತು ಹಾಗೂ ಕಡತಗಳನ್ನು ದಿನಾಂಕ:15.04.2008ರಂದು ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–1 ಇವರಿಗೆ ಹಸ್ತಾಂತರಿಸಲಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ನೊಂದಾಣಿ ಸಂಖ್ಯೆ: ಕೆಎ–19–ಎಂ–4629ರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಂದ ಪಡೆದು ಪ್ರಕರಣ ಪತ್ತೆ ಮಾಡಿದ ಪೊಲೀಸ್ ಅಧಿಕಾರಿಗಳು ಇಲಾಖೆಗೆ ಸಲ್ಲಿಸಿದ್ದು, ಸದರಿ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನವು ಮಾರುತಿ 800 ಕಾರು ಆಗಿರದೇ **ಪ್ರಿಮಿಯರ್ ಪದ್ಮಿನಿ ಡೀಸೆಲ್ ಕಾರು** ಎಂದು ದೃಢೀಕೃತವಾಗಿರುವುದು ಕಂಡು ಬರುತ್ತದೆ.

ಮೊಕದ್ದಮೆಯ ತನಿಖೆಯನ್ನು ಪ್ರಕರಣ ಪತ್ತೆ ಹಚ್ಚಿದ ಪೊಲೀಸ್ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ ಇವರು ಪ್ರಕರಣದಲ್ಲಿ ಜಪ್ತಾದ ಸಾರಾಯಿ ಸ್ಯಾಚೇಟುಗಳ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ವಿಶ್ಲೇಷಣಾ ವರದಿಯನ್ನು ಪ್ರಕರಣದ ಮುಂದಿನ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–1 ಇವರಿಗೆ ಸಲ್ಲಿಸಿದ್ದು, ಸದರಿ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ಸಾರಾಯಿಯಲ್ಲಿ ಮದ್ಯಸಾರದ ಪ್ರಮಾಣ 36.0% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಸದರಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತು ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಅಬಕಾರಿ ಉಪನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–1 ಇವರು ದಿನಾಂಕ:19.04.2008ರಂದು ಶಿಫಾರಸ್ಸು ಮಾಡಿ ವರದಿ ಸಲ್ಲಿಸಿರುತ್ತಾರೆ. ಆ ಪ್ರಕಾರ ಪ್ರಕರಣದಲ್ಲಿ ಜಪ್ತಾದ 100 ಮಿಲಿಯ 6900 ಸಾರಾಯಿ ಸ್ಯಾಚೇಟು (ಮಾದರಿಗಳನ್ನು ಹೊರತುಪಡಿಸಿ) ಗಳನ್ನು ಮತ್ತು ನೋಕಿಯೋ ಮೊಬೈಲ್ ಸೆಟ್ಟನ್ನು ಪ್ರಾಧಿಕಾರದ ದಿನಾಂಕ:17.05.2008ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿಯನ್ನು ನಾಶಪಡಿಸಲು ಆದೇಶಿಸಲಾಗಿರುತ್ತದೆ.

ಪ್ರಕರಣದಲ್ಲಿ ಜಪ್ತಾದ ವಾಹನ ಮಾರುತಿ 800 ಕಾರು ಸಂಖ್ಯೆ: ಕೆಎ–19ಎಂ–4629 ಇದರ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಾಹನ ಪ್ರಿಮಿಯರ್ ಪದ್ಮಿನಿ ಡೀಸೆಲ್ ಕಾರು ಎಂದು ದೃಢೀಕೃತವಾಗಿದ್ದು, ಆದಾಗ್ಯೂ ಸದ್ರಿ ವರದಿಯ ಪ್ರಕಾರ ಮಾಲೀಕರಾದ ಶ್ರೀ ದಿನೇಶ್ ಎಂ. ಬಿನ್ ದಿ:ಕೃಷ್ಣಪ್ಪ, ದೀಪಕ್, ಎಲೆಕ್ಟ್ರಾನಿಕ್ ಅಂಡ್ ಸರ್ವಿಸ್, ಜೆ.ವಿ. ಸನ್ಸ್‌ನ ಹಿಂದುಗಡೆ, ಸರ್ಕಾರಿ ಕಾಲೇಜಿನ ಎದುರುಗಡೆ, ಮಂಗಳೂರು ಇವರಿಗೆ ಮತ್ತು ಪ್ರಕರಣದ ಆರೋಪಿತ ವ್ಯಕ್ತಿಗಳಿಗೆ ದಿನಾಂಕ:18.08.2008ರಂದು ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ನೀಡಲಾದ ಕಾರಣ ಕೇಳಿ ನೋಟಿಸುಗಳು ವಾಹನದ ಮಾಲೀಕರಿಗೆ ಹಾಗೂ ಆರೋಪಿತ ವ್ಯಕ್ತಿಗಳಿಗೆ ಜಾರಿಯಾಗಿದ್ದು, ಶ್ರೀ ದಿನೇಶ್ ಎಂ. ಬಿನ್ ದಿ:ಕೃಷ್ಣಪ್ಪ ಇವರು ದಿನಾಂಕ:04.09.2008ರಂದು ಪ್ರಾಧಿಕಾರಕ್ಕೆ ಉತ್ತರ ನೀಡಿ ತನ್ನ ಒಡೆತನದಲ್ಲಿರುವ ಕೆಎ–19ಎಂ–4629 ಎಂಬ ನೋಂದಾಣಿ ಸಂಖ್ಯೆ: ಇರುವ ಪ್ರಿಮಿಯರ್ ಪದ್ಮಿನಿ ಡೀಸೆಲ್ ಕಾರು ಈ ತನಕ ಯಾವುದೇ ಅಪರಾಧದಲ್ಲಿ ಶಾಮೀಲಾಗದೇ ತನ್ನ ಸುಪರ್ದಿಯಲ್ಲಿಯೇ ಇರುವುದರಿಂದ ಸದರಿ ಕಾರು ಯಾವ ಕಾರಣಕ್ಕೂ ಮುಟ್ಟುಗೋಲು ಪ್ರಕ್ರಿಯೆಗೆ ಬದ್ಧವಾಗುವುದಿಲ್ಲ ಎಂದು ತಿಳಿಸಿ, ಪೊಲೀಸ್ ಅಧಿಕಾರಿಗಳು ಅಬಕಾರಿ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡಿರುವ ಕೆಎ–19ಎಂ–4629 ಎಂಬ ಸಂಖ್ಯಾ ಫಲಕ ಇರುವ ಮಾರುತಿ 800 ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ವಿಷಯದಲ್ಲಿ ಯಾವುದೇ ಆಕ್ಷೇಪ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಪ್ರಕರಣದ ಆರೋಪಿತ ವ್ಯಕ್ತಿಗಳಿಗೆ ನೀಡಲಾದ ಕಾರಣ ಕೇಳಿ ನೋಟಿಸ್ಸು ದಿನಾಂಕ:29.08.2008ರಂದು ಜಾರಿಯಾಗಿದ್ದರೂ, ಸದರಿಯವರಿಂದ ಯಾವುದೇ ಉತ್ತರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಾಧಾರಗಳೊಂದಿಗೆ ಸಾಬೀತು ಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಾಗಿರುವ ದಾಖಲಾತಿಗಳ ಪ್ರಕಾರ ದಿನಾಂಕ:14.06.2005ರಂದು ಕೆಎ–19ಎಂ–4629 ಎಂದು ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರು ಇದರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಚಾಲಕನು 690.000 ಲೀ (6900 ಸಾರಾಯಿ ಸ್ಯಾಚೇಟುಗಳು) ಸಾರಾಯಿಯನ್ನು ಸಾಗಾಟ ಮಾಡುತ್ತಿದ್ದುದನ್ನು ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಮಂಗಳೂರುರವರು ಪತ್ತೆಹಚ್ಚಿ, ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಲಾದ ವಾಹನ ಮತ್ತು ಸೊತ್ತುಗಳನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ಸಾರಾಯಿ ಮಾದರಿಗಳು ರಾಸಾಯನಿಕ ತಜ್ಞರ ವರದಿಯಂತೆ ಸಾರಾಯಿಯೆಂದು ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34 ಶಿಕ್ಷಾರ್ಹಕ ಅಪರಾಧವಾಗಿರುವುದರಿಂದ, ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದ ಬಿ ರಿಜಿಸ್ಟ್ರಾರ್ ವರದಿಯ ಪ್ರಕಾರ ಜಪ್ತುಪಡಿಸಿಕೊಂಡ ವಾಹನದ ನೊಂದಣಿ ಸಂಖ್ಯೆ: ಕೆಎ–19ಎಂ–4629 ಪದ್ಮಿನಿ ಪ್ರಿಮಿಯರ್ ಕಾರಿನದ್ದಾಗಿದ್ದು, ಜಪ್ತಾಗಿರುವ ಮಾರುತಿ 800 ಕಾರಿಗೆ ಆರೋಪಿಗಳು ಸದರಿ ನಂಬರನ್ನು ನಕಲಿಯಾಗಿ ಉಪಯೋಗಿಸಿರುವುದು ಸಾಭೀತಾಗಿದ್ದು, ಆರೋಪಿಗಳು ದುರುದ್ದೇಶದಿಂದ ನಕಲಿ ಸಂಖ್ಯಾ ಫಲಕವನ್ನು ಅಳವಡಿಸಿಕೊಂಡು ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಸಾಭೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಕೆಎ–19ಎಂ–4629 ಎಂದು ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರನ್ನು ವಶಪಡಿಸಿಕೊಂಡು ಸುಮಾರು 3 ವರ್ಷ 6 ತಿಂಗಳು ಕಳೆದರೂ ವಾಹನ ಮಾಲೀಕರು ತಮ್ಮ ವಾಹನದ ಒಡೆತನವನ್ನು ಸಾಭೀತುಪಡಿಸಿಕೊಂಡು ಸಮಂಜಾಯಿಷಿಯನ್ನು ನೀಡಿರುವುದಿಲ್ಲ. ಹಾಗೂ ಮಾಲೀಕತ್ವವನ್ನು ಕೋರಿ ಯಾವುದೇ ಅರ್ಜಿಯನ್ನು ವಾಹನದ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುವುದಿಲ್ಲ. ಈ ಕಾರಣದಿಂದಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಆರೋಪಿತ ವ್ಯಕ್ತಿಗಳೊಂದಿಗೆ ವಾಹನದ ಮಾಲೀಕರ ಶಾಮೀಲಾತಿ ಹಾಗೂ ತಿಳುವಳಿಕೆಯಿಂದಲೇ ವಾಹನಕ್ಕೆ ನಕಲಿ ಸಂಖ್ಯಾ ಫಲಕವನ್ನು ಅಳವಡಿಸಿಕೊಂಡು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಕಂಡುಬರುತ್ತದೆ. ಅಲ್ಲದೇ ವಾಹನವನ್ನು ಪಡೆಯಲು ಮತ್ತು ತಕ್ಷೀರನ್ನು ನಡೆಸಲು ಉತ್ಸುಕರಾಗಿಲ್ಲ ಎಂಬುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ. ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ ರವರು ಸದರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಮಾಡಿ, ಸ್ಥಳ ಮಹಜರಿನ ಮೂಲಕ ಸಾಗಾಣಿಕೆಗೆ ಬಳಸಿದ ವಾಹನವನ್ನು ಹಾಗೂ ಅಕ್ರಮ ಸಾರಾಯಿಯನ್ನು ಜಪ್ತುಪಡಿಸಿರುವುದು ಮತ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಜಪ್ತು ಪಡಿಸಲಾದ ಪದಾರ್ಥವು ಸಾರಾಯಿಯೆಂದು ದೃಢೀಕೃತವಾಗಿರುವುದು ಇದು ಅಕ್ರಮವಾಗಿ ಸಾರಾಯಿಯನ್ನು ವಾಹನದಲ್ಲಿ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಈ ಮೇಲಿನ ಎಲ್ಲಾ ದಾಖಲಾತಿಗಳಿಂದ ಸಾಭೀತಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಮಂಗಳೂರು ಇವರು ವಶಪಡಿಸಿಕೊಂಡ ಕೆಎ–19ಎಂ–4629 ಎಂದು ನಕಲಿ ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರನ್ನು ವಶಪಡಿಸಿಕೊಂಡು ಸುಮಾರು 3 ವರ್ಷ 6 ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಆದರೆ ಯಾವುದೇ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಕಾರಣ ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿದ ಕೆಎ–19ಎಂ–4629 ಎಂದು ನಕಲಿ ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡುವುದು ಯೋಗ್ಯವೆಂದು ಕಂಡುಬಂದ ಹಿನ್ನೆಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಮಂಗಳೂರು ಇವರ ಕ್ರೈ ಸಂಖ್ಯೆ:205/2005, ದಿನಾಂಕ:14.06.2005

ರಲ್ಲಿ ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿದ ಕೆಎ–19ಎಂ–4629 ಎಂದು ನಕಲಿ ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರು (ಚಾಸೀಸ್ ಸಂಖ್ಯೆ:SB308N453274 ಹಾಗೂ ಇಂಜಿನ್ ಸಂಖ್ಯೆ 8BCN649227) ಇದನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಸದರಿ ನೊಂದಣಿ ಸಂಖ್ಯೆಯ ಕೆಎ–19ಎಂ–4629 ನೈಜ ಸಂಖ್ಯೆ ಹೊಂದಿರುವ ಪದ್ಮಿನಿ ಪ್ರಿಮಿಯರ್ ಕಾರಿನ ಆರ್.ಸಿ. ಮಾಲೀಕರಾದ ಶ್ರೀ ದಿನೇಶ್ ಎಂ. ಇವರ ಪದ್ಮಿನಿ ಪ್ರಿಮಿಯರ್ ಕಾರನ್ನು ಈ ಮುಟ್ಟುಗೋಲು ನಡವಳಿಗಳಿಂದ ಹೊರತುಪಡಿಸಿ, ಸದರಿ ವಾಹನಕ್ಕೆ ಈ ಪ್ರಾಧಿಕಾರದ ಯಾವುದೇ ಬಾಧೆ ಹಾಗೂ ಹೊಣೆ ಇರುವುದಿಲ್ಲವೆಂದು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:22.12.2008ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.83

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/88/ಡಿಟಿಸಿಆರ್/2007–08, ದಿನಾಂಕ:30ನೇ ಡಿಸೆಂಬರ್, 2008**

**ಉಪಸ್ಥಿತರು:** ನೂರ್‌ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು:** |
|---|---|
| ಅಬಕಾರಿ ಉಪ ನಿರೀಕ್ಷಕರು (ನಂ.1) ಜಾರಿ ಮತ್ತು ತನಿಖೆ, ಮಂಗಳೂರು ಉತ್ತರ. | 1) ರಾಜೇಶ್ ರಾವ್ (26 ವ), ಬಿನ್ ದಿ: ಆನಂದ ರಾವ್, ವಾಸ: ಪರಪು ಹೌಸ್, ಕುಕ್ಕುಂದೂರ್ ಗ್ರಾಮ, ಕಾರ್ಕಳ.<br>2) ಉಮೇಶ್ ಶೆಟ್ಟಿ (19 ವ), ಬಿನ್ ರಾಜೀವ್ ಶೆಟ್ಟಿ, ವಾಸ: ಪರಪು ಹೌಸ್, ತಾಲ್ಲೂಕು ಕಛೇರಿ ಹತ್ತಿರ, ಕಾರ್ಕಳ.<br>3) ದಿನೇಶ್ ಆಚಾರಿ (18 ವ), ಬಿನ್ ಆನಂದ ಆಚಾರ್ಯ, ವಾಸ: ಕುಕ್ಕುಂದೂರ್ ದರ್ಖಾಸ್ತು ಹೌಸ್, ಕಾರ್ಕಳ.<br>**ವಾಹನ ಮಾಲೀಕರು:**<br>ಶ್ರೀ ಅರವಿಂದ ಪಿ. ಶೆಣೈ, ಬಿನ್ ಮಂಗಳಪಾಡಿ ಪುಂಡಲೀಕ ಶೆಣೈ, ಸಪ್ತಗಿರಿ 1ನೇ ಮಹಡಿ, ವ್ಯಾಸರಾವ್ ರೋಡ್, ಮಂಗಳೂರು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು (ನಂ.1) ಜಾರಿ ಮತ್ತು ತನಿಖೆ, ಮಂಗಳೂರು ಉತ್ತರ ಇವರು ತಮ್ಮ ಸಿಬ್ಬಂದಿಯವರೊಂದಿಗೆ ಮಂಗಳೂರು ತಾಲ್ಲೂಕು ಕದ್ರಿ ಮಲ್ಲಿಕಟ್ಟೆ ಪೆಟ್ರೋಲ್ ಬಂಕ್ ಬಳಿ ಅಬಕಾರಿ ಅಕ್ರಮಗಳನ್ನು ತಡೆಗಟ್ಟುವ ಬಗ್ಗೆ ಗಸ್ತು ತಿರುಗುತ್ತಿದ್ದಾಗ ದಿನಾಂಕ:20.09.2007 ರಂದು ಮಂಗಳೂರಿನಿಂದ ಕಾರ್ಕಳಕ್ಕೆ ವಾಹನ ಮೂಲಕ ಅಕ್ರಮವಾಗಿ ನಕಲಿ ಮದ್ಯ ಸಾಗಾಟ ಮಾಡುತ್ತಿದ್ದಾರೆಂಬ ಖಚಿತ ವರ್ತಮಾನದ ಮೇರೆಗೆ ಮಂಗಳೂರು ತಾಲ್ಲೂಕು ಬೆಂದೂರು ಜಂಕ್ಷನ್ ಬಳಿ ರಸ್ತೆಗಾವಲು ನಡೆಸುತ್ತಿದ್ದ ಸಂದರ್ಭದಲ್ಲಿ ಕಂಕನಾಡಿ ಕಡೆಯಿಂದ ನಂತೂರು ಕಡೆಗೆ ವೇಗವಾಗಿ ಬರುತ್ತಿದ್ದ ಮಾರುತಿ ಕಾರನ್ನು ಬೆನ್ನಟ್ಟಿ ಕದ್ರಿ ಮಲ್ಲಿಕಟ್ಟೆ ಪೆಟ್ರೋಲ್ ಬಂಕ್ ಬಳಿ ತಡೆದು ನಿಲ್ಲಿಸಿ ವಿಚಾರಿಸಿದಾಗ, ಸದರಿ ಕಾರಿನಲ್ಲಿ ಯಾವುದೇ ರಹದಾರಿ ಪತ್ರವಿಲ್ಲದೇ ಅಕ್ರಮವಾಗಿ ಮದ್ಯವನ್ನು ಸಾಗಾಣಿಕೆ ಮಾಡುತ್ತಿರುವುದು ಪತ್ತೆಯಾಗಿದ್ದು, ನ್ಯಾಯಾಲಯದ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣ ಹಾಗೂ ಸಮಯ ವಿಳಂಬವಾದಲ್ಲಿ ಅಪರಾಧವನ್ನು ಮರೆಮಾಡುವ ಸಾಧ್ಯತೆಯಿರುವ ಕಾರಣ ಸ್ಥಳದಲ್ಲಿಯೇ ಸರ್ಚ್ ಮೆಮೊವನ್ನು ತಯಾರಿಸಿ, ಸದರಿ ಕಾರನ್ನು ಪರಿಶೀಲಿಸಿದಾಗ, ಅದು ಮಾರುತಿ 800 ಕಾರು ಆಗಿದ್ದು, ಅದರ ನೋಂದಣಿ ಸಂಖ್ಯೆ: ಸಿಕೆಎಸ್–4068 ಆಗಿರುತ್ತದೆ. ಸದರಿ ಕಾರಿನಲ್ಲಿ ಒಟ್ಟು 3 ಜನ ಕುಳಿತ್ತಿದ್ದು, ಸೀಟಿನ ಹಿಂಬದಿಯಲ್ಲಿ ಒಟ್ಟು 6 ರಟ್ಟಿನ ಪೆಟ್ಟಿಗೆಗಳಲ್ಲಿ ತಲಾ 750 ಎಂ.ಎಲ್. ನ 12 ಸೀಸೆಗಳಲ್ಲಿ ಮೈಸೂರು ಲ್ಯಾನ್ಸರ್ ಎಂಬ ಲೇಬಲ್ ಹಚ್ಚಿರುವ ಒಟ್ಟು 72 ಸೀಸೆಗಳಲ್ಲಿ 54.000 ಲೀಟರ್ ಮದ್ಯವಿದ್ದು, ಇವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ, ಮದ್ಯದ ಸೀಸೆಗಳಿಗೆ ಅಬಕಾರಿ ಭದ್ರತಾ ಚೀಟಿಗಳು ಇಲ್ಲದಿದ್ದು, ನಕಲಿ ಮದ್ಯದಂತೆ ಕಂಡುಬಂತು ಸ್ಥಳದಲ್ಲಿಯೇ ಪಂಚರಾಗಿ ಸಹಕರಿಸಲು ಯಾರೂ ಮುಂದೆ ಬಾರದಿರುವ ಕಾರಣ ಇಲಾಖೆಯವರನ್ನೇ ಪಂಚರಾಗಿ ಇರಿಸಿಕೊಳ್ಳಲಾಯಿತು. ಕಾರು ಚಲಾಯಿಸುತ್ತಿದ್ದ ವ್ಯಕ್ತಿಯ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ರಾಜೇಶ್ ರಾವ್ (26

ವ), ಬಿನ್ ದಿ. ಆನಂದ ರಾವ್, ವಾಸ: ಪರಪು ಹೌಸ್, ಕುಕ್ಕುಂದೂರು ಗ್ರಾಮ, ಕಾರ್ಕಳ ಮತ್ತು ಇತರ ಇಬ್ಬರು ವ್ಯಕ್ತಿಗಳಲ್ಲಿ ಒಬ್ಬಾತ ಉಮೇಶ್ ಶೆಟ್ಟಿ ಬಿನ್ ರಾಜೀವ್ ಶೆಟ್ಟಿ, ವಾಸ: ಪರಪು ಹೌಸ್, ತಾಲ್ಲೂಕು ಕಛೇರಿ ಹತ್ತಿರ, ಕಾರ್ಕಳ ಹಾಗೂ ಇನ್ನೊಬ್ಬ ವ್ಯಕ್ತಿ ದಿನೇಶ್ ಆಚಾರಿ (18 ವ), ಬಿನ್ ಆನಂದ ಆಚಾರ್ಯ, ವಾಸ: ಕುಕ್ಕುಂದೂರ್ ದರ್ಖಾಸ್ತು ಹೌಸ್, ಕಾರ್ಕಳ ಎಂದು ತಿಳಿಸಿರುತ್ತಾರೆ. ಇದು ಅಕ್ರಮ ನಕಲಿ ಮದ್ಯ ಸಾಗಾಣಿಕೆಯಾಗಿರುವುದರಿಂದ ಮತ್ತು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 11 ಮತ್ತು 14ರಂತೆ ಅಪರಾಧವಾಗಿದ್ದು, ಕಲಂ 32, 34 ಮತ್ತು 38(ಎ) ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ, ನಕಲಿ ಮದ್ಯವನ್ನು ಮತ್ತು ಸಾಗಾಣಿಕೆಗೆ ಬಳಸಿದ ಮಾರುತಿ 800 ಕಾರು ಸಂಖ್ಯೆ: ಸಿಕೆಎಸ್-4068ನ್ನು ವಶಪಡಿಸಿಕೊಂಡು ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಮಹಜರನ್ನು ಸ್ಥಳದಲ್ಲಿಯೇ ತಯಾರಿಸಿ ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ: 9/2007-08ರಂತೆ ಪ್ರಕರಣವನ್ನು ನೋಂದಾಯಿಸಿ ಆರೋಪಿಗಳನ್ನು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಈ ಪ್ರಾಧಿಕಾರದಲ್ಲಿ ಪ್ರಥಮ ಮಾಹಿತಿ ವರದಿಯನ್ನು ಹಾಜರುಪಡಿಸಿ ತಕ್ಷೀರಿನ ಮುಂದಿನ ತನಿಖೆಯನ್ನು ಮುಂದುವರಿಸಿರುತ್ತಾರೆ.

ಈ ಪ್ರಾಧಿಕಾರದಿಂದ ದಿನಾಂಕ:29.09.2007ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಪತ್ರ ಬರೆಯಲಾಗಿದ್ದು, ಸದರಿ ಪತ್ರದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಸಿಕೆಎಸ್-4068ರ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸವನ್ನು ಹಾಗೂ ವಾಹನದ ನೋಂದಣಿ ಮಾಲೀಕತ್ವವನ್ನು ಬದಲಾಯಿಸಬಾರದೆಂದು ಪತ್ರ ಬರೆಯಲಾಗಿತ್ತು. ಸದರಿ ಪತ್ರದ ಅನುಸಾರ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರುರವರು ವಾಹನದ ನೋಂದಣಿ ಸಂಖ್ಯೆ: ಸಿಕೆಎಸ್-4068ರ ವಾಹನವು ಮಾರುತಿ 800 ಕಾರು ಆಗಿದ್ದು, ಇದು 1989 ಮಾಡೆಲ್ ಆಗಿದ್ದು, ಇದರ ಚಾಸೀಸ್ ನಂ.ಎಸ್‌ಬಿ308ಐ ಎನ್ 289073 ಮತ್ತು ಇಂಜಿನ್ ನಂ.397999 ಹಾಗೂ ಇದರ ನೋಂದಣಿ ಮಾಲೀಕ ಶ್ರೀ ಅರವಿಂದ ಪಿ. ಶೆಣೈ, ಬಿನ್ ಮಂಗಳಪಾಡಿ ಪುಂಡಲೀಕ ಶೆಣೈ, ಸಪ್ತಗಿರಿ 1ನೇ ಮಹಡಿ, ವ್ಯಾಸರಾವ್ ರೋಡ್, ಮಂಗಳೂರು ತಾಲ್ಲೂಕು ಎಂದು ಹಾಗೂ ಸಿ.ಸಿ. ಯನ್ನು ದಿನಾಂಕ:06.04.2000 ರಂದು ಉಡುಪಿ ಜಿಲ್ಲೆ, ಉಡುಪಿ ಇವರಿಗೆ ವಾಹನದ ನೋಂದಣಿ ಮಾಲೀಕತ್ವದ ಬದಲಾವಣೆಗಾಗಿ ಕಳುಹಿಸಲಾಗಿದೆ ಎಂದು ಬಿ ರಿಜಿಸ್ಟರ್ ಎಕ್ಸ್‌ಟ್ರಾಕ್ಟ್ ಮೂಲಕ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಉಡುಪಿ ಜಿಲ್ಲೆ, ಉಡುಪಿ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:06.11.2007ರಂದು ಪತ್ರ ಬರೆಯಲಾಗಿದ್ದು, ಸದರಿ ಪತ್ರದಲ್ಲಿ ವಾಹನದ ನೋಂದಣಿ ಮಾಲೀಕತ್ವ ಬದಲಾವಣೆಯಾಗಿದ್ದಲ್ಲಿ, ವಾಹನದ ನೋಂದಣಿ ಮಾಲೀಕತ್ವದ ಬಗ್ಗೆ ವಿವರಗಳನ್ನು ನೋಂದಣಿ ಬಿ ರಿಜಿಸ್ಟರ್ ಎಕ್ಸ್‌ಟ್ರಾಕ್ಟ್ ಮೂಲಕ ಈ ಪ್ರಾಧಿಕಾರಕ್ಕೆ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ಕೋರಲಾಗಿದ್ದು, ಈವರೆಗೆ ಯಾವುದೇ ಪತ್ರ ಈ ಪ್ರಾಧಿಕಾರಕ್ಕೆ ಬಂದಿರುವುದಿಲ್ಲ.

ವಾಹನದ ನೋಂದಣಿ ಮಾಲೀಕರಾದ ಶ್ರೀ ಅರವಿಂದ ಪಿ. ಶೆಣೈ ಬಿನ್ ಮಂಗಳಪಾಡಿ ಪುಂಡಲೀಕ ಶೆಣೈ, ಸಪ್ತಗಿರಿ 1ನೇ ಮಹಡಿ, ವ್ಯಾಸ ರಾವ್ ರೋಡ್, ಮಂಗಳೂರು ತಾಲ್ಲೂಕು ಮತ್ತು ತಕ್ಷೀರಿನಲ್ಲಿ ದಸ್ತಗಿರಿಯಾದ ಆರೋಪಿಗಳಾದ ರಾಜೇಶ್ ರಾವ್ (26 ವ), ಬಿನ್ ದಿ. ಆನಂದ ರಾವ್, ವಾಸ: ಪರಪು ಹೌಸ್, ಕುಕ್ಕುಂದೂರು ಗ್ರಾಮ, ಕಾರ್ಕಳ ಮತ್ತು ಉಮೇಶ್ ಶೆಟ್ಟಿ (19 ವ), ಬಿನ್ ರಾಜೀವ್ ಶೆಟ್ಟಿ, ವಾಸ: ಪರಪು ಹೌಸ್, ತಾಲ್ಲೂಕು ಕಛೇರಿ ಹತ್ತಿರ, ಕಾರ್ಕಳ ಹಗೂ ದಿನೇಶ್ ಆಚಾರಿ (18 ವ), ಬಿನ್ ಆನಂದ ಆಚಾರ್ಯ, ವಾಸ: ಕುಕ್ಕುಂದೂರ್ ದರ್ಖಾಸ್ತು ಹೌಸ್, ಕಾರ್ಕಳ ಇವರಿಗೆ ಈ ಪ್ರಾಧಿಕಾರವು ದಿನಾಂಕ:15.07.2008 ರಂದು ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43(ಬಿ) ಪ್ರಕಾರ ಕಾರಣ ಕೇಳಿ ನೋಟಿಸುಗಳನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸಿನಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ರ ನೋಂದಣಿ ಸಂಖ್ಯೆ: ಸಿಕೆಎಸ್-4068 ಮತ್ತು ಇತರೆ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಎ) ರಂತೆ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದಾಗಿ ಈ ಕಾರಣ ಕೇಳಿ ನೋಟೀಸು ನೀಡಲಾಗಿ, ಈ ನೋಟೀಸು ಹೊರಡಿಸಿರುವ ದಿನಾಂಕದಿಂದ 7 ದಿವಸದೊಳಗಾಗಿ ನಿಮ್ಮ ಹೇಳಿಕೆಗಳನ್ನು ಖುದ್ದಾಗಿ ಅಥವಾ ವಕೀಲರ ಮೂಲಕ ಸಲ್ಲಿಸಲು ಸೂಚಿಸಿದ್ದು, ತಪ್ಪಿದಲ್ಲಿ ನಿಮ್ಮ ಹೇಳಿಕೆ ಏನೂ ಇರುವುದಿಲ್ಲವೆಂದು ಪರಿಗಣಿಸಿ ಕಾನೂನು ರೀತ್ಯ ಕ್ರಮ ಜರುಗಿಸಲಾಗುವುದೆಂದು ತಿಳಿಸಲಾಗಿರುತ್ತದೆ. ಆರ್.ಸಿ. ಮಾಲೀಕರಾದ ಶ್ರೀ ಅರವಿಂದ ಪಿ. ಶೆಣೈ ಇವರಿಗೆ ನೀಡಿದ ನೋಟೀಸಿನಲ್ಲಿ ಸದರಿಯವರು ಸದರಿ ವಿಳಾಸದಲ್ಲಿ ಇಲ್ಲವೆಂದು ಅಂಚೆ ಇಲಾಖೆಯ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಹಿಂದೆ ಬಂದಿರುತ್ತದೆ. ಆದಾಗ್ಯೂ ಸದರಿ ಕಾರಣ ಕೇಳಿ ನೋಟೀಸನ್ನು ಅಬಕಾರಿ ನಿರೀಕ್ಷಕರು, ಮಂಗಳೂರು ಉತ್ತರ ವಲಯ ಇವರ ಮೂಲಕ ಖುದ್ದಾಗಿ ವಾಹನದ ಮಾಲೀಕರಾದ ಶ್ರೀ ಅರವಿಂದ ಶೆಣೈ ಇವರಿಗೆ ಜಾರಿ ಮಾಡಲಾಗಿದ್ದು, ಸದರಿಯವರಿಂದ ಯಾವುದೇ ಉತ್ತರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ ಹಾಗೂ ಪ್ರಕರಣದ ಆರೋಪಿಯಾದ ರಾಜೇಶ್‌ರಾವ್ ಇವರು ದಿನಾಂಕ:24.07.2008 ರಂದು ನೋಟಿಸನ್ನು ಸ್ವೀಕರಿಸಿದ್ದು, ಅಂಚೆ ಸ್ವೀಕೃತ ಪತ್ರ ಈ ಪ್ರಾಧಿಕಾರಕ್ಕೆ ಬಂದಿರುತ್ತದೆ. ಅವರಿಂದಲೂ ಸಹಾ ನೋಟೀಸಿಗೆ ಉತ್ತರ ಬಂದಿರುವುದಿಲ್ಲ.

ಅಬಕಾರಿ ನಿರೀಕ್ಷಕರು, ಮಂಗಳೂರು ಉತ್ತರ ವಲಯ-1, ಮಂಗಳೂರು ಇವರ ತನಿಖಾ ವರದಿ ಸಂಖ್ಯೆ:16/2007-08 ದಿನಾಂಕ: 29.07.2008ರ ಪತ್ರದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದ ಸ್ಯಾಂಪಲ್ ಸೀಸೆಗಳನ್ನು ರಾಸಾಯನಿಕ

ವಿಶ್ಲೇಷಣೆಗೆ ಕಳುಹಿಸಲಾಗಿದ್ದು ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ಪತ್ರ ಸಂಖ್ಯೆ: ಇ–337–6 ದಿನಾಂಕ:07.11.2007ರಲ್ಲಿ ಮದ್ಯದ ಮದ್ಯಸಾರ ಅಂಶವು 31 ಇದ್ದು 60 ಡಿಗ್ರಿ ಒ.ಪಿ. ಇರುವುದಾಗಿ ದೃಢೀಕರಣ ಪತ್ರ ನೀಡಿರುವುದರಿಂದ, ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಹಾಗೂ ಸಾಗಾಣಿಕೆಗೆ ಬಳಸಿದ ಮಾರುತಿ 800 ಕಾರು ಸಂಖ್ಯೆ:ಸಿಕೆಎಸ್–4068ರ ವಾರೀಸುದಾರರು ಮುಂದೆ ಬಾರದೆ ಇದ್ದುದರಿಂದ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಈ ಪ್ರಾಧಿಕಾರದ ದಿನಾಂಕ:04.09.2008ರ ಆದೇಶದಂತೆ ಪ್ರಕರಣದಲ್ಲಿ ಜಪ್ತುಪಡಿಸಿಕೊಳ್ಳಲಾದ 54 ಲೀಟರು ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸರ್ಕಾರದ ಪ್ರಸ್ತುತ ಅಧಿಸೂಚನೆಯಂತೆ ಮುಟ್ಟುಗೋಲು ಹಾಕಿಕೊಂಡ ಮದ್ಯವನ್ನು ನಾಶಪಡಿಸಲು ಆದೇಶಿಸಲಾಗಿರುತ್ತದೆ.

ನಂತರ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಪರ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಯ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷಾ ಸಾಕ್ಷಿಗಳು ಹಾಜರಾಗದೇ ಇದುದ್ದರಿಂದ ಪ್ರತಿ ರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:20.09.2007 ರಂದು ಮಾರುತಿ 800 ಕಾರು ಸಂಖ್ಯೆ: ಸಿಕೆಎಸ್–4068 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಮದ್ಯ ಸಾಗಾಣಿಕೆ ಮಾಡಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು ತನಗೆ ತಿಳಿಯದೇ ಅಕ್ರಮ ಮದ್ಯ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಶ್ರೀ ವಿನೋದ್‌ಕುಮಾರ್, ಅಬಕಾರಿ ಉಪ ನಿರೀಕ್ಷಕರು (1), ಮಂಗಳೂರು ಉತ್ತರ ವಲಯ–1 ಇವರು ದಿನಾಂಕ:30.12.2008ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ಪಿರ್ಯಾದುದಾರರಾಗಿದ್ದು, ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಕಳೆದ ನಾಲ್ಕು ವರ್ಷಗಳಿಂದ ಮಂಗಳೂರು ಉತ್ತರ ಜಾರಿ ಮತ್ತು ತನಿಖೆ ಕಛೇರಿಯಲ್ಲಿ ಅಬಕಾರಿ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಪ್ರಸ್ತುತ 1–4–2008 ರಿಂದ ಅಬಕಾರಿ ನಿರೀಕ್ಷಕರ ಕಛೇರಿ ಮಂಗಳೂರು ಉತ್ತರ ವಲಯ–1 ಇಲ್ಲಿ ಅಬಕಾರಿ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿನಾಂಕ:20.09.2007ರಂದು 7.30 ಗಂಟೆ ಸಮಯಕ್ಕೆ ಮಂಗಳೂರು ನಗರದ ಬೆಂದೂರುವೆಲ್ ಬಳಿ ಗಸ್ತು ತಿರುಗುತ್ತಿರುವ ಸಮಯದಲ್ಲಿ ಒಂದು ಮಾರುತಿ ವಾಹನದಲ್ಲಿ ಮದ್ಯ ಸರಬರಾಜು ಆಗುತ್ತಿರುವ ಬಗ್ಗೆ ದೂರವಾಣಿ ಮೂಲಕ ಒಂದು ಖಚಿತ ವರ್ತಮಾನ ಬಂದಿದ್ದು, ಈ ಬಗ್ಗೆ ನಾವು ಹಾಗೂ ಸಿಬ್ಬಂದಿಯವರು ಬೆಂದೂರ್‌ವೆಲ್ ಸರ್ಕಲ್‌ನಲ್ಲಿ ವಾಹನಕ್ಕಾಗಿ ಕಾದು ನಿಂತಿರುವ ಸಮಯದಲ್ಲಿ ಸಿಕೆಎಸ್–4068 ಸಂಖ್ಯೆಯ ಮಾರುತಿ 800 ವಾಹನ ಬರುತ್ತಿರುವುದನ್ನು ಕಂಡು ಅದನ್ನು ನಿಲ್ಲಿಸಲು ಸೂಚಿಸಿದಾಗ ವಾಹನವು ನಿಲ್ಲಿಸದೇ ವೇಗವಾಗಿ ಮುಂದಕ್ಕೆ ಚಲುಸುತ್ತಿರುವುದನ್ನು ಕಂಡು ಸದರಿ ವಾಹನವನ್ನು ಇಲಾಖಾ ವಾಹನದಲ್ಲಿ ಬೆನ್ನಟ್ಟಿ ನಂತೂರು ಸರ್ಕಲ್ ಬಳಿ ವಾಹನವನ್ನು ಅಡ್ಡಗಟ್ಟಿ ನಿಲ್ಲಿಸಿ ಪರಿಶೀಲನೆ ಮಾಡಿದಾಗ ವಾಹನದಲ್ಲಿ ಚಾಲಕ ಹಾಗೂ ಇನ್ನಿಬ್ಬರು ವ್ಯಕ್ತಿಗಳಿದ್ದು ಚಾಲಕನಲ್ಲಿ ವಾಹನದಲ್ಲಿ ಏನಿದೆ ಎಂದು ವಿಚಾರಿಸಲಾಗಿ ವಾಹನದಲ್ಲಿ ಮದ್ಯ ಇರುವುದೆಂದು ತಿಳಿಸಿದ್ದು, ವಾಹನವನ್ನು ಸರ್ಚ್ ಮಾಡಲು ನ್ಯಾಯಾಲಯದಿಂದ ಸರ್ಚ್ ವಾರೆಂಟ್ ತೆಗೆದುಕೊಳ್ಳಲು ಸಾಕಷ್ಟು ಕಲಾವಕಾಶವಿಲ್ಲದೇ ಇರುವುದರಿಂದ ಸ್ಥಳದಲ್ಲಿಯೇ ಸರ್ಚ್ ಮೆಮೋವನ್ನು ತಯಾರಿಸಲಾಯಿತು. ಸದರಿ ಸರ್ಚ್ ಮೆಮೋವನ್ನು ನಿಶಾನೆ ಪಿ–1 ಎಂದು ಗುರುತಿಸಲಾಯಿತು. ನಂತರ ಸದರಿ ವಾಹನದಲ್ಲಿರುವ ಚಾಲಕ ಹಾಗೂ ಎದುರು ಸೀಟಿನಲ್ಲಿ ಓರ್ವ ವ್ಯಕ್ತಿ ಮತ್ತು ಹಿಂದಿನ ಸೀಟಿನಲ್ಲಿ ಇನ್ನೊರ್ವ ವ್ಯಕ್ತಿ ಕುಳಿತ್ತಿದ್ದು, ಆತನ ಪಕ್ಕದಲ್ಲಿ ಆರು ರಟ್ಟಿನ ಪೆಟ್ಟಿಗೆಗಳಲ್ಲಿ ಮದ್ಯ ಇರುವುದು ಕಂಡುಬಂತು. ಸದರಿ ಮದ್ಯವನ್ನು ಕೊಂಡೊಯ್ಯಲು ಪರವಾನಿಗೆ ಇದೆಯೇ ಎಂದು ಕೇಳಿದಾಗ ಯಾವುದೇ ದಾಖಲಾತಿಗಳು ಇಲ್ಲವೆಂದು ತಿಳಿಸಿರುತ್ತಾನೆ. ನಂತರ ಸದರಿ ಪೆಟ್ಟಿಗೆಗಳನ್ನು ತೆರೆದು ನೋಡಿದಾಗ ಅದರಲ್ಲಿ ಮೈಸೂರು ಲ್ಯಾನ್ಸರ್ ಎಂಬ ಹೆಸರಿನ ವಿಸ್ಕಿ ಇದ್ದು, ಅದರ ಮೇಲೆ ಭದ್ರತಾ ಚೀಟಿ ಇಲ್ಲದೇ ಇರುವುದು ಕಂಡು ಬಂದಿದ್ದು, ಇದನ್ನು ನಕಲಿ ಮದ್ಯವೆಂದು ಖಾತರಿಪಡಿಸಿಕೊಳ್ಳಲಾಯಿತು. ಸದರಿ ಪ್ರತಿ ಪೆಟ್ಟಿಗೆಯಲ್ಲಿ 750 ಎಂಎಲ್‌ನ 12 ಬಾಟಲಿಗಳಂತೆ ಆರು ರಟ್ಟಿನ ಪೆಟ್ಟಿಗೆಗಳಲ್ಲಿ ಒಟ್ಟು 72 ಬಾಟಲಿಗಳು ಇದ್ದು ಒಟ್ಟು 54.000 ಲೀಟರು ಮದ್ಯ ಇದ್ದು, ಸದರಿ ನಕಲಿ ಮದ್ಯವನ್ನು ವಶಪಡಿಸಿಕೊಂಡು ನಂತರ ಚಾಲಕನ ಹೆಸರು ಕೇಳಲಾಗಿ ರಾಜೇಶ್ ರಾವ್, ಪ್ರಾಯ:24 ವರ್ಷ, ಬಿನ್ ದಿ:ಆನಂದರಾವ್, ಕುಕ್ಕದೂರು ಗ್ರಾಮ, ಕಾರ್ಕಳ ತಾಲ್ಲೂಕು ಎಂದು ಹೇಳಿಕೆ ನೀಡಿರುತ್ತಾನೆ. ಸೀಟಿನ ಮುಂಭಾಗದಲ್ಲಿದ್ದ ಇನ್ನೊರ್ವ ವ್ಯಕ್ತಿಯ ಹೆಸರು ಕೇಳಲಾಗಿ ರಮೇಶ್ ಶೆಟ್ಟಿ,

ಪ್ರಾಯ–19, ಬಿನ್ ರಾಜೇಶ್ ಶೆಟ್ಟಿ, ಪಡ್ಪು ಹೌಸ್, ಕಾರ್ಕಳ ತಾಲ್ಲೂಕು ಎಂದು ತಿಳಿಸಿರುತ್ತಾನೆ. ನಂತರ ಕಾರಿನ ಹಿಂಬದಿ ಸೀಟಿನಲ್ಲಿ ಕುಳಿತ್ತಿದ್ದ ವ್ಯಕ್ತಿಯ ಹೆಸರು ಕೇಳಲಾಗಿ ತನ್ನ ಹೆಸರು ದಿನೇಶ್ ಆಚಾರಿ ಪ್ರಾಯ 18 ವರ್ಷ, ಬಿನ್ ಆನಂದ ಆಚಾರಿ, ಕುಕ್ಕಂದೂರು ಗ್ರಾಮ, ಕಾರ್ಕಳ ತಾಲ್ಲೂಕು ಎಂದು ತಿಳಿಸಿರುತ್ತಾನೆ. ಸದರಿ ಸಿಕ್ಕಿದ ಸೊತ್ತುಗಳನ್ನು ನಕಲಿ ಮದ್ಯದ ಪ್ರತಿಯೊಂದು ರಟ್ಟಿನ ಪೆಟ್ಟಿಗೆಯಿಂದ 750 ಎಂಎಲ್‌ನ ಒಂದು ಬಾಟಲಿಯಂತೆ ಒಟ್ಟು 6 ಬಾಟಲಿಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ತೆಗೆದು ಮುಚ್ಚಳಕ್ಕೆ ಬಟ್ಟೆ ದಾರ ಕಟ್ಟಿ ಇಲಾಖಾ ಸೀಲು ಮಾಡಿ ಮಾದರಿ ಮೊಹರನ್ನು ಮತ್ತು ಮಹಜರನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ತಯಾರಿಸಲಾದ ಮಹಜರನ್ನು ಈಗ ಗುರುತಿಸಿದ್ದು ಅದನ್ನು ನಿಶಾನೆ ಪಿ–2 ಎಂದು ಅದರ ಮೇಲಿನ ಸಹಿಯನ್ನು ನಿಶಾನೆ ಪಿ–2ಎ ಎಂದು ಗುರುತಿಸಲಾಯಿತು. ಸೊತ್ತು ಪಟ್ಟಿ ತಯಾರಿಸಲಾಯಿತು. ಅದನ್ನು ನಿಶಾನೆ ಪಿ–3 ಎಂದು ಮಾದರಿ ಮೊಹರನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು. ನಂತರ ಆರೋಪಿಯ ಹೆಸರು, ವಿಳಾಸ ಇರುವ ಗುರುತು ಚೀಟಿಯನ್ನು ಎಲ್ಲಾ ವಸ್ತುಗಳಿಗೆ ಹಾಗೂ ರಾಸಾಯನಿಕ ಪರೀಕ್ಷೆಗಾಗಿ ತೆಗೆದ ಮಾದರಿ ಸೀಸೆಗಳಿಗೆ ಅಂಟಿಸಲಾಯಿತು. ನಂತರ ದೊರೆತ ನಕಲಿ ಮದ್ಯವನ್ನು ಹಾಗೂ ಕಾರನ್ನು ಮತ್ತು ಆರೋಪಿಗಳನ್ನು ಇಲಾಖಾ ವಶಕ್ಕೆ ಪಡೆದುಕೊಳ್ಳಲಾಯಿತು. ನಂತರ ಕಛೇರಿಗೆ ಬಂದು ಪ್ರ.ಮಾ. ವರದಿಯನ್ನು ತಯಾರಿಸಿದೆನು. ಇದನ್ನು ನೋಡಿ ನಿಶಾನೆ ಪಿ–5 ಎಂದು ಗುರುತಿಸಿ ಅದರ ಮೇಲಿನ ಸಹಿಯನ್ನು ನಿಶಾನೆ ಪಿ–5 ಎಂದು ಗುರುತಿಸಲಾಯಿತು. ಸೊತ್ತು ಪಟ್ಟಿಯೊಂದಿಗೆ ಪ್ರಥಮ ಮಾಹಿತಿ ವರದಿಯನ್ನು ಹಾಗೂ ಆರೋಪಿಗಳನ್ನು ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಲಾಯಿತು.

ಪ್ರಕರಣದ ಮುಂದಿನ ತನಿಖೆಯನ್ನು ಕೈಗೊಂಡು ಜಪ್ತು ಪಡಿಸಿದ ಮದ್ಯವನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ಮಾದರಿಗಳನ್ನು ದಿನಾಂಕ:15.10.2007ರಂದು ಅಬಕಾರಿ ರಕ್ಷಕರಾದ ಶ್ರೀ ಯು. ಉಮೇಶ್ ಇವರ ಮುಖಾಂತರ ಕಳುಹಿಸಿಕೊಟ್ಟು ರಾಸಾಯನಿಕ ವಿಶ್ಲೇಷಣಾ ವರದಿಯನ್ನು ದಿನಾಂಕ:07.11.2007ರಂದು ಕಛೇರಿಯಲ್ಲಿ ಪಡೆದುಕೊಂಡಿರುತ್ತೇನೆ. ರಾಸಾಯನಿಕ ವಿಶ್ಲೇಷಣಾ ವರದಿ ಪ್ರತಿಯನ್ನು ನೋಡಿ ನಿಶಾನೆ ಪಿ–6 ಎಂದು ಗುರುತಿಸಲಾಯಿತು. ಪ್ರಕರಣದಲ್ಲಿ ಜಪ್ತುಪಡಿಸಿದ ವಾಹನದ ಬಗ್ಗೆ ಬಿ ರಿಜಿಸ್ಟ್ರಾರ್ ವರದಿ ಒದಗಿಸುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಉಡುಪಿ ಜಿಲ್ಲೆ ಇವರಿಗೆ 24.10.2007ರಂದು ಪತ್ರ ಬರೆಯಲಾಗಿದೆ. ಪ್ರಕರಣದ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ದಿನಾಂಕ:29.07.2008ರಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತೇನೆ. ಇದನ್ನು ನೋಡಿ ನಿಶಾನೆ ಪಿ–7 ಎಂದು ಗುರುತಿಸಲಾಯಿತು. ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿ ಮಾನ್ಯ ಜೆ.ಎಂ.ಎಫ್.ಸಿ. 3ನೇ ನ್ಯಾಯಾಲಯ ಮಂಗಳೂರು ಇವರಿಗೆ ದಿನಾಂಕ:26.07.2008 ರಂದು ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ.

ಆದರೆ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ತನ್ನ ನಿರುಪರಾಧಿತ್ವವನ್ನು ಸಾಭೀತುಪಡಿಸುವ ಬಗ್ಗೆ ಅಗತ್ಯ ದಾಖಲಾತಿಗಳೊಂದಿಗೆ ಹಾಜರಾಗದೇ ಇರುವ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿದೆ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ:20.09.2007ರಂದು ಜಪ್ತುಪಡಿಸಿರುವ ಮಾರುತಿ 800 ಕಾರು ಸಂಖ್ಯೆ: ಸಿಕೆಎಸ್–4068 ಇದರಲ್ಲಿ ಯಾವುದೇ ರಹದಾರಿ ಇಲ್ಲದೇ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡಿರುವ ಬಗ್ಗೆ ಅಭಿಯೋಗ ಪರ ಪಿಡಬ್ಲ್ಯೂ–1ರವರು ನೀಡಿದ ಸಾಕ್ಷಿ ಹಾಗೂ ದಾಖಲಾತಿಗಳಿಂದ ದೃಢಪಟ್ಟಿರುವುದರಿಂದ ಹಾಗೂ ವಾಹನದ ಮಾಲೀಕರು ತನ್ನ ನಿರುಪರಾಧಿತ್ವವನ್ನು ಸಾಭೀತುಪಡಿಸುವರೇ ಯಾವುದೇ ದಾಖಲಾತಿಗಳನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಲು ವಿಫಲರಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇದು ಅಕ್ರಮ ಮದ್ಯ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಭೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಆದರೆ ಈ ಪ್ರಕರಣದ ವಾಹನದ ಮಾಲೀಕರಿಗೆ ಕಲಂ 43(ಬಿ) ಅಡಿಯಲ್ಲಿ ನೋಂದಾಯಿತ ಅಂಚೆ ಮೂಲಕ ನೀಡಲಾದ ಕಾರಣ ಕೇಳಿ ನೋಟೀಸು ಜಾರಿಯಾಗದಿದ್ದರೂ, ಅಬಕಾರಿ ನಿರೀಕ್ಷಕರು, ಮಂಗಳೂರು ಉತ್ತರ ವಲಯ–1 ಇವರ ಮುಖೇನಾ ನೀಡಲಾದ ಕಾರಣ ಕೇಳಿ ನೋಟೀಸು ಆರ್.ಸಿ. ಮಾಲೀಕರಾದ ಶ್ರೀ ಅರವಿಂದ ಶೆಣೈ ಇವರಿಗೆ ಖುದ್ದಾಗಿ ಜಾರಿಯಾಗಿದ್ದು, ಸುಮಾರು ಐದು ತಿಂಗಳು ಕಳೆದಿದ್ದರೂ ಕಾರಣ ಕೇಳಿ ನೋಟೀಸಿಗೆ ಯಾವುದೇ ಸಮಜಾಯಿಷಿ ಉತ್ತರ ನೀಡದೇ ಇರುವುದು ಹಾಗೂ ವಾಹನ ಜಪ್ತಾಗಿ ಸುಮಾರು 1 ವರ್ಷ 3 ತಿಂಗಳುಗಳು ಕಳೆದಿದ್ದರೂ ವಾಹನದ ಮಾಲೀಕರು ತನ್ನ ವಾಹನವನ್ನು ಪಡೆದುಕೊಳ್ಳುವ ಬಗ್ಗೆ ಕಾನೂನು ರೀತ್ಯಾ ಯಾವುದೇ

ಕ್ರಮಕೈಗೊಳ್ಳದೇ ಇರುವುದು ಹಾಗೂ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಾಧಾರಗಳೊಂದಿಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂದು ರುಜುವಾತುಪಡಿಸಲು ವಿಫಲರಾಗಿರುವುದನ್ನು ಪರಿಗಣಿಸಿದಾಗ, ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ತನ್ನ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಭೀತಾಗಿರುವುದಲ್ಲದೆ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಭೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಮಾರುತಿ 800 ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡು ಬಂದಿರುವುದರಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಮಾರುತಿ 800 ಕಾರು ಸಂಖ್ಯೆ: ಸಿಕೆಎಸ್–4068ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ನೇ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ಅಬಕಾರಿ ಉಪ ನಿರೀಕ್ಷಕರು (1) ಮಂಗಳೂರು ಉತ್ತರ ವಲಯ–1 ಇವರ ತಕ್ಷೀರು ಸಂಖ್ಯೆ:9/2007–08 ದಿನಾಂಕ:20.09.2007ರಲ್ಲಿ ಜಪ್ತುಪಡಿಸಿಕೊಂಡಿರುವ ಮಾರುತಿ 800 ಕಾರು ಸಂಖ್ಯೆ: ಸಿಕೆಎಸ್–4068 (ಚಾಸೀಸ್ ನಂ.SB308IN289073 ಇಂಜಿನ್ ನಂ.397999)ನ್ನು ನಿಯಮ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:30.12.2008ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಕುರಿತು ವಾಹನದ ವಿಲೆಯನ್ನು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ತರಲು ಆದೇಶಿಸಿದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–1 : ಶ್ರೀ ವಿನೋದ್‌ಕುಮಾರ್, ಅಬಕಾರಿ ಉಪ ನಿರೀಕ್ಷಕರು(1), ಮಂಗಳೂರು ಉತ್ತರ ವಲಯ–1.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ–1 : ಸರ್ಚ್ ಮೆಮೊ
ನಿಶಾನೆ ಪಿ–2 : ಮಹಜರು ಪ್ರತಿ
ನಿಶಾನೆ ಪಿ–2ಎ: ಮಹಜರು ಮೇಲಿನ ಸಾಕ್ಷಿಗಳ ಸಹಿ
ನಿಶಾನೆ ಪಿ–3 : ಜಪ್ತುಪಡಿಸಿದ ಸೊತ್ತುಗಳ ಪಟ್ಟಿ
ನಿಶಾನೆ ಪಿ–4 : ಮಾದರಿ ಮೊಹರು
ನಿಶಾನೆ ಪಿ–5 : ಪ್ರಥಮ ವರ್ತಮಾನ ವರದಿ
ನಿಶಾನೆ ಪಿ–5ಎ : ಅದರ ಮೇಲಿನ ಸಹಿ
ನಿಶಾನೆ ಪಿ–6 : ರಾಸಾಯನಿಕ ವಿಶ್ಲೇಷಣಾ ವರದಿ.
ನಿಶಾನೆ ಪಿ–7 : ತನಿಖಾ ವರದಿ ದಿನಾಂಕ:29.07.2008

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ಅರ್ಜಿದಾರರ ಹೇಳಿಕೆ:** – ಯಾವುದು ಇಲ್ಲ–

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:** – ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಪಿ.ಆರ್.84
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

### ಅಧಿಸೂಚನೆ

**ಸಂಖ್ಯೆ: ಎ3–ಸಿಓಎನ್–ಸಿಆರ್–2/2009–10, ದಿನಾಂಕ:15ನೇ ಮೇ, 2009**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಅರಣ್ಯ ಅಪರಾಧ ಪ್ರಕರಣ ಸಂಬಂಧ ಕೆಳಕಂಡ ವಾಹನಗಳನ್ನು ವಲಯ ಅರಣ್ಯಾಧಿಕಾರಿ, ಚನ್ನಗಿರಿ ವಲಯದ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್–71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ.

| ಕ್ರ. ಸಂ. | ಮೊಕದ್ದಮೆ ಸಂಖ್ಯೆ | ವಾಹನಗಳ ವಿವರ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ವಲಯ ಅರಣ್ಯಾಧಿಕಾರಿ, ಚನ್ನಗಿರಿ ಅರಣ್ಯ ಮೊಕದ್ದಮೆ ನಂ.30/2009–10 ದಿನಾಂಕ:11.05.2009 | ಬಿಳಿ ಅಂಬಾಸಿಡರ್ ಸಂ.ಸಿಕೆಪಿ–9984, | R-6K-0307640 | B-11K-427172 |
| | | ನೀಲಿ ಬಣ್ಣದ ಲಗೇಜ್ ಆಟೋ ಸಂ: ಕೆಎ–35–8716 | ಇಂಜಿನ್ ನಂ.40 (ಸ್ಪಷ್ಟವಾಗಿ ಕಾಣುತ್ತಿಲ್ಲ) | 363114 |
| | | ಜನರೇಟರ್ | | |

ಈ ಮೇಲ್ಕಂಡ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಈ ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ಈ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಟಿ. ಹೀರಾಲಾಲ್**

ಪಿ.ಆರ್.431

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಹಾಸನ ಜಿಲ್ಲೆ, ಹಾಸನ

### ಪ್ರಕಟಣೆ

**ಸಂ/ಜಿಸಕಅ/ಡಿ5/ಸಿಆರ್7/09–10, ದಿನಾಂಕ:20ನೇ ಮೇ, 2009**

**ವಿಷಯ:** 2009–10ನೇ ಸಾಲಿಗೆ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವ ಕುರಿತು.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂ/681/ಎಸ್‌ಡಬ್ಲ್ಯೂ89/ಬೆಂಗಳೂರು ದಿನಾಂಕ:02.01.1990.

2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ರವರ ಪತ್ರ ಸಂ / ಸಕನಿ / ಸಿಎಸ್/1/ಸಿಆರ್36/07–08 ದಿನಾಂಕ:04.10.2008.

3) ದಿನಾಂಕ:12.05.2009 ರಂದು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಹಾಸನ ಇವರ ಅಧ್ಯಕ್ಷತೆಯಲ್ಲಿ ನಡೆದ ಎಂಪಿಐಸಿ ಸಭಾ ನಡವಳಿ.

ಉಲ್ಲೇಖದ ಸರ್ಕಾರಿ ಆದೇಶಾನುಸಾರ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ವಕೀಲ ವೃತ್ತಿ ಮತ್ತು ನ್ಯಾಯಾಂಗ ಸೇವೆಗೆ ಸಂಬಂಧಿಸಿದಂತೆ ಆಡಳಿತ ನ್ಯಾಯಾಧೀಕರಣದಲ್ಲಿ 4 ವರ್ಷಗಳ ತರಬೇತಿ ನೀಡುವ ಕುರಿತು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಂತೆ ಇಚ್ಛೆಯುಳ್ಳ ಅರ್ಹ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಂದ 2009–10ನೇ ಸಾಲಿಗೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ನಿಬಂಧನೆಗಳು:**

1) ಅಭ್ಯರ್ಥಿಗಳು ಪ.ಜಾತಿ/ ಪ.ವರ್ಗಕ್ಕೆ ಸೇರಿದವರಾಗಿರಬೇಕು. ಅದಕ್ಕೆ ಸಂಬಂಧಿಸಿದಂತೆ ಜಾತಿ ಪತ್ರದ ದೃಢೀಕೃತ ಪ್ರತಿಯನ್ನು ಲಗತ್ತಿಸುವುದು.

2) ಹಾಸನ ಜಿಲ್ಲೆಗೆ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.

3) ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿಯಲ್ಲಿ ತೇರ್ಗಡೆಯಾದವರು ಮಾತ್ರ ಈ ತರಬೇತಿಗೆ ಅರ್ಹರಾಗಿರುತ್ತಾರೆ. 2 ವರ್ಷಕ್ಕೂ ಮೇಲ್ಪಟ್ಟ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಅರ್ಜಿಯೊಂದಿಗೆ ಈ ಬಗ್ಗೆ ಕಾನೂನು ಪದವಿಯ ಅಂಕಪಟ್ಟಿಗಳ ದೃಢೀಕೃತ ಪ್ರತಿಯನ್ನು ಲಗತ್ತಿಸುವುದು.

4) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ನ್ಯಾಯಾಂಗ ಆಡಳಿತ ತರಬೇತಿಯನ್ನು ಸರ್ಕಾರಿ ವಕೀಲರು ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು 20 ವರ್ಷಗಳ ಅನುಭವ ಹೊಂದಿರುವ ಹಿರಿಯ ವಕೀಲರ ಅಧೀನದಲ್ಲಿ ನೀಡಲಾಗುವುದು.

5) ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ 1000/– ತರಬೇತಿ ಭತ್ಯೆ ನೀಡಲಾಗುವುದು.

6) ಅಭ್ಯರ್ಥಿಯ ವಯಸ್ಸು ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು. ಈ ಕುರಿತು ಅಧಿಕೃತ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ವರ್ಗಾವಣೆ ಪ್ರಮಾಣ ಪತ್ರ) ಸಲ್ಲಿಸಬೇಕು.

7) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ಒದಗಿಸಿದ್ದಲ್ಲಿ ಅಂತಹವರನ್ನು ಕಾನೂನಿನ ಪ್ರಕಾರ ಶಿಸ್ತು ಕ್ರಮಕ್ಕೆ ಒಳಪಡಿಸಲಾಗುತ್ತದೆ ಅಥವಾ ತರಬೇತಿಯನ್ನು ಮಧ್ಯೆ ಬಿಟ್ಟು ಹೋದಲ್ಲಿ ಅವರಿಗೆ ನೀಡಿದ ತರಬೇತಿ ಭತ್ಯೆಯ ಹಣವನ್ನು ಶೇ.10 ರಷ್ಟು ಬಡ್ಡಿ ಸೇರಿಸಿ ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಈ ಬಗ್ಗೆ ಆಯ್ಕೆಯಾದ ಅಭ್ಯರ್ಥಿಗಳು ಕರಾರು ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಹಾಸನ ಇವರಿಗೆ ಬರೆದುಕೊಡತಕ್ಕದ್ದು.

8) ಪೂರ್ಣ ಭರ್ತಿ ಮಾಡಿದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಜಿಲ್ಲಾ ಮಟ್ಟದ ನ್ಯಾಯಾಂಗ ತರಬೇತಿ ಸಮಿತಿ ಹಾಗೂ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಹಾಸನ ಇವರಿಗೆ ದಿನಾಂಕ:20.06.2009ರ ಸಂಜೆ 5.00 ಗಂಟೆಯ ಒಳಗೆ ಸಲ್ಲಿಸತಕ್ಕದ್ದು.

9) ಅಪೂರ್ಣ ಮಾಹಿತಿ ಸಲ್ಲಿಸಿದ ಹಾಗೂ ಅನರ್ಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಹಕ್ಕು ಸಮಿತಿಗೆ ಇರುತ್ತದೆ.

10) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ಹೆಸರನ್ನು ನೊಂದಾಯಿಸಿರಬೇಕು. ಈ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.

11) ಅರ್ಜಿಗಳಿಗಾಗಿ ಹಾಗೂ ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯನ್ನು ಸಂಪರ್ಕಿಸಲು ತಿಳಿಸಿದೆ.

12) ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಮುಖಾಂತರ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

13) ಆಯ್ಕೆಯಾದ ಅಭ್ಯರ್ಥಿಗಳಿಗೆ 15 ದಿವಸಗಳ ಕಾಲಾವಕಾಶ ನೀಡಿ ಒಪ್ಪಿಗೆ ಪತ್ರ ನೀಡಲು ಸೂಚಿಸಲಾಗುವುದು. 15 ದಿನಗಳೊಳಗೆ ಒಪ್ಪಿಗೆಯ ಕರಾರು ಪತ್ರವನ್ನು ಸಲ್ಲಿಸದೇ ಇದ್ದಲ್ಲಿ ಅಂತವರ ಆಯ್ಕೆಯನ್ನು ರದ್ದುಪಡಿಸಲಾಗುವುದು.

ಜಿಲ್ಲಾ ಸಮಾಜ ಕಲ್ಯಾಣ
ಪಿ.ಆರ್.433 ಅಧಿಕಾರಿ, ಹಾಸನ ಜಿಲ್ಲೆ, ಹಾಸನ.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

## ಕಾರ್ಯನಿರ್ವಾಹಕ ಅಭಿಯಂತರರು(ವಿ), ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ, ಗುಲಬರ್ಗಾ

## ಪ್ರಕಟಣೆ

**ಸಂಖ್ಯೆ: ಎಲ್‌ಸಿ610/ಕಾನಿಅ(ವಿ)ಬೃಕಾವಿ/ಗು/ಸಕಾನಿಅ(ವಿ)/2008–09/121–23, ದಿನಾಂಕ:**

ಕ.ವಿ.ಪ್ರ.ನಿ.ನಿ.ಯು 2003ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಪ್ರಕರಣದ 67ರ ಅನ್ವಯ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರಿ ನಿಯಮದ ಪ್ರಕರಣದ 67(2)(ಸಿ)ರ ಅನ್ವಯ ಈ ಮೂಲಕ ಯೋಜನೆಗಳನ್ನು ತಿಳುವಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಯ ವಿವರಗಳು ಈ ರೀತಿ ಇವೆ.

**1) ಯೋಜನೆಯ ಹೆಸರು:** ಗುಲಬರ್ಗಾ ಜಿಲ್ಲೆ, ಸೇಡಂ ತಾಲ್ಲೂಕಿನ ಮಳಖೇಡ ರೇಲ್ವೆ ನಿಲ್ದಾಣದ ವ್ಯಾಪ್ತಿಯಲ್ಲಿ ರೇಲ್ವೆ ಮಾರ್ಗ ವಿದ್ಯುದೀಕರಣಗೊಳಿಸುವುದಕ್ಕಾಗಿ 110 ಕೆ.ವಿ. ವಿದ್ಯುತ್ ಕೇಂದ್ರದ ಸ್ಥಾಪನೆ ಮತ್ತು ಹಾಲಿ ಇರುವ 220 ಕೆ.ವಿ. ವಿದ್ಯುತ್ ಕೇಂದ್ರದಿಂದ 110 ಕೆ.ವಿ. ವಿದ್ಯುತ್ ಗೋಪುರಗಳ ಮೇಲೆ 14.81 ಕಿ.ಮೀ. ವಿದ್ಯುತ್ ಮಾರ್ಗ ನಿರ್ಮಾಣ ಮಾಡುವುದು.

**2) ಯೋಜನೆಯ ಪ್ರಯೋಜನಗಳು:** ಭಾರತೀಯ ರೇಲ್ವೆ ಇಲಾಖೆ ರವರ ವತಿಯಿಂದ ಮಳಖೇಡ ರೇಲ್ವೆ ನಿಲ್ದಾಣದ ವ್ಯಾಪ್ತಿಯಲ್ಲಿ ರೇಲ್ವೆ ಮಾರ್ಗವನ್ನು ವಿದ್ಯುದೀಕರಣಗೊಳಿಸುವುದು.

**3) 110 ಕೆ.ವಿ. ಮಾರ್ಗ ಹಾದುಹೋಗುವ ಹಳ್ಳಿಗಳು ಮತ್ತು ಪ್ರದೇಶಗಳು:** ಸೇಡಂ, ಹೊಸಳ್ಳಿ, ಹಂಗೆನಹಳ್ಳಿ ಹಾಗೂ ಮಳಖೇಡ.

**4) ಅಂದಾಜು ವೆಚ್ಚ:** ವಿದ್ಯುತ್ ಮಾರ್ಗ ನಿರ್ಮಾಣಕ್ಕೆ ತಗಲುವ ವೆಚ್ಚ ರೂ.525.92 ಲಕ್ಷಗಳು.

5) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ (III)ರ (ಕೇಂದ್ರಿಯ ಕಾಯಿದೆ 1885ರ 13) ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಗಮನಕ್ಕೆ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 15 ದಿನಗಳ ಒಳಗೆ ಈ ಕೆಳ ಸಹಿದಾರರ ಕಛೇರಿಗೆ ಕಳುಹಿಸಬಹುದು.

ಕಾರ್ಯನಿರ್ವಾಹಕ ಅಭಿಯಂತರರು (ವಿ)
ಪಿ.ಡಿ.27 ಬ್ಯ.ಕಾ.ವಿಭಾಗ, ಕ.ವಿ.ಪ್ರ.ನಿ.ನಿ. ಗುಲಬರ್ಗಾ.

**ಭೂ ದಾಖಲೆಗಳ ಜಂಟಿ ನಿರ್ದೇಶಕರು, ಮರುಭೂಮಾಪನ, ಬೆಳಗಾವಿ**

**ಅಧಿಸೂಚನೆ**

**ಸಂಖ್ಯೆ: ಮರುಭೂಮಾಪನ:ನೊ–1/08–09, ದಿನಾಂಕ:24ನೇ ಮಾರ್ಚ್, 2009**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 106 ಹಾಗೂ ಘನ ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಕಂ.ಇ/29/ಭೂದಾಸ/2009, ದಿನಾಂಕ:20.02.2009ರ ಮೇರೆಗೆ 109, 112 ಹಾಗೂ 152ರಲ್ಲಿ ನಿಹಿತವಾದ ಅಧಿಕಾರದ ಮೇರೆಗೆ ಭೂದಾಖಲೆಗಳ ಜಂಟಿ ನಿರ್ದೇಶಕರು, ಮರು ಭೂಮಾಪನ, ಬೆಳಗಾವಿ ಆದ ನಾನು ಬೆಳಗಾವಿ ಜಿಲ್ಲೆಯಲ್ಲಿ ಬೆಳಗಾವಿ/ ಖಾನಾಪುರ/ ಹುಕ್ಕೇರಿ ತಾಲ್ಲೂಕುಗಳಲ್ಲಿ ಈ ಕೆಳಕಂಡ ಗ್ರಾಮಗಳಲ್ಲಿ ಮರುಭೂಮಾಪನ ಹಾಗೂ ಮರುಭೂವರ್ಗೀಕರಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ.

ಮೇಲ್ಕಂಡ ಯೋಜನೆಯಲ್ಲಿ ಬರತಕ್ಕ ಗ್ರಾಮಗಳ ಎಲ್ಲ ಹಿಡುವಳಿದಾರರು/ ಮಾಲೀಕರು ಅಳತೆಗೆ ಬರತಕ್ಕ ಮೋಜಣಿದಾರರಿಗೆ ಅಗತ್ಯ ಸಹಾಯ (ಕೂಲಿಗಳನ್ನು ಒದಗಿಸುವುದು ಇತ್ಯಾದಿ) ವನ್ನು ಪೂರೈಸತಕ್ಕದ್ದು.

ಭೂದಾಖಲೆಗಳ ಜಂಟಿ ನಿರ್ದೇಶಕರು,
ಮರುಭೂಮಾಪನ, ಬೆಳಗಾವಿ.

| ಅ.ನಂ. | ತಾಲ್ಲೂಕು | ಗ್ರಾಮದ ಹೆಸರು |
|---|---|---|
| 1. | ಬೆಳಗಾವಿ | 1) ಕೋಳಿಕೊಪ್ಪ<br>2) ಕೊಂಡಸಕೊಪ್ಪ<br>3) ಶಗನಮಟ್ಟಿ<br>4) ಕಮಕಾರಟ್ಟಿ<br>5) ಹುಲಿಕಟ್ಟಿ |
| 2. | ಹುಕ್ಕೇರಿ | 1) ಜಾಬಾಪುರ<br>2) ಕೋಚರಿ<br>3) ಗೌಡವಾಡ<br>4) ಮಸರಗುಪ್ಪಿ<br>5) ಅರ್ಜುನವಾಡ |
| 3. | ಖಾನಾಪುರ | 1) ಹಲಕರ್ಣಿ<br>2) ಹತ್ತರಗುಂಜಿ<br>3) ಮುಡೇವಾಡಿ<br>4) ಡುಕ್ಕರವಾಡಿ<br>5) ಬರಗಾಂವ |

**ಷರಾ:** ಭೂಮಾಪನ ತಂಡವು ಆಯಾ ಗ್ರಾಮಗಳಲ್ಲಿ ಬರತಕ್ಕ ಸರ್ಕಾರಿ ನಂಬರುಗಳನ್ನು ಅಳತೆ ಮಾಡಿ ಸುತ್ತೋಲೆಯಂತೆ ದಾಖಲೆಗಳನ್ನು ತಯಾರಿಸುವುದು.

ಭೂದಾಖಲೆಗಳ ಜಂಟಿ ನಿರ್ದೇಶಕರು,
ಮರುಭೂಮಾಪನ, ಬೆಳಗಾವಿ.

**ಭೂ ದಾಖಲೆಗಳ ಜಂಟಿ ನಿರ್ದೇಶಕರು, ಮರುಭೂಮಾಪನ, ಬೆಳಗಾವಿ**

**ಅಧಿಸೂಚನೆ**

**ಸಂಖ್ಯೆ: ಮರುಭೂಮಾಪನ:ನೊ–1/08–09, ದಿನಾಂಕ:30ನೇ ಏಪ್ರಿಲ್, 2009**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 106 ಹಾಗೂ ಘನ ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಕಂ.ಇ/29/ಭೂದಾಸ/2009, ದಿನಾಂಕ:20.02.2009ರ ಮೇರೆಗೆ 109, 112 ಹಾಗೂ 152ರಲ್ಲಿ ನಿಹಿತವಾದ ಅಧಿಕಾರದ

ಮೇರೆಗೆ ಭೂದಾಖಲೆಗಳ ಜಂಟಿ ನಿರ್ದೇಶಕರು, ಮರು ಭೂಮಾಪನ, ಬೆಳಗಾವಿ ಆದ ನಾನು ಬೆಳಗಾವಿ ಜಿಲ್ಲೆಯಲ್ಲಿ ಬೆಳಗಾವಿ/ ಖಾನಾಪುರ/ ಹುಕ್ಕೇರಿ ತಾಲ್ಲೂಕುಗಳಲ್ಲಿ ಈ ಕೆಳಕಂಡ ಗ್ರಾಮಗಳಲ್ಲಿ ಮರುಭೂಮಾಪನ ಹಾಗೂ ಮರುಭೂವರ್ಗೀಕರಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ.

ಮೇಲ್ಕಂಡ ಯೋಜನೆಯಲ್ಲಿ ಬರತಕ್ಕ ಗ್ರಾಮಗಳ ಎಲ್ಲ ಹಿಡುವಳಿದಾರರು/ ಮಾಲೀಕರು ಅಳತೆಗೆ ಬರತಕ್ಕ ಮೋಜಣಿದಾರರಿಗೆ ಅಗತ್ಯ ಸಹಾಯ (ಕೂಲಿಗಳನ್ನು ಒದಗಿಸುವುದು ಇತ್ಯಾದಿ) ವನ್ನು ಪೂರೈಸತಕ್ಕದ್ದು.

ಭೂದಾಖಲೆಗಳ ಜಂಟಿ ನಿರ್ದೇಶಕರು,
ಮರುಭೂಮಾಪನ, ಬೆಳಗಾವಿ.

| ಅ.ನಂ. | ತಾಲ್ಲೂಕು | ಗ್ರಾಮದ ಹೆಸರು |
|---|---|---|
| 1. | ಬೆಳಗಾವಿ | 1) ತಾರಿಹಾಳ<br>2) ಸಿದ್ದನಭಾವಿ<br>3) ಬಸ್ತವಾಡ<br>4) ಧಾಮಣಿ<br>5) ಕಣವಿಕರವಿನಕೊಪ್ಪ<br>6) ಬಾಗೇವಾಡಿ<br>7) ಬಸ್ಸಾಪೂರ<br>8) ಶಿಂಧೊಳ್ಳಿ<br>9) ಮಾಸ್ತಮರಡಿ<br>10) ಹಲಗಾ |
| 2. | ಹುಕ್ಕೇರಿ | 1) ಹೆಬ್ಬಾಳ<br>2) ಕಮತನೂರ<br>3) ಮದಿಹಳ್ಳಿ<br>4) ಗಾಂವನಾಳ<br>5) ಬೆಣಿವಾಡ<br>6) ಬಸ್ತವಾಡ<br>7) ರಕ್ಷಿ<br>8) ಗೋಟೂರ<br>9) ನೇರಲಿ<br>10) ಮದಮಕ್ಕನಾಳ |
| 3. | ಖಾನಾಪುರ | 1) ಹರಸನವಾಡಿ<br>2) ರಾಮಗುರವಾಡಿ<br>3) ಮಾನಸಾಪುರ<br>4) ಖೆಮೆಮಾಡಿ<br>5) ದೊಡ್ಡಹೋಸೂರ<br>6) ಕುಪಟಗೇರಿ<br>7) ಹಲಸಗಾ<br>8) ಬಂಥರಗಾಳಿ<br>9) ಅಂಕಲೆ |

**ಷರಾ:** ಭೂಮಾಪನ ತಂಡವು ಆಯಾ ಗ್ರಾಮಗಳಲ್ಲಿ ಬರತಕ್ಕ ಸರ್ಕಾರಿ ನಂಬರುಗಳನ್ನು ಅಳತೆ ಮಾಡಿ ಸುತ್ತೋಲೆಯಂತೆ ದಾಖಲೆಗಳನ್ನು ತಯಾರಿಸುವುದು.

ಭೂದಾಖಲೆಗಳ ಜಂಟಿ ನಿರ್ದೇಶಕರು,
ಮರುಭೂಮಾಪನ, ಬೆಳಗಾವಿ.

ಪಿ.ಆರ್.432

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ:** ಸ್ಥಗಿತಗೊಂಡಿರುವ ಸನ್‌ಕರ್ ವಿವಿಧೋದ್ದೇಶ ಸಹಕಾರ ಸಂಘ ನಿ., ಕೆ.ಬಿ. ಬಡಾವಣೆ, ದಾವಣಗೆರೆ–2 ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ: ಸಸಿ31/ಸ್ಥಗಿತ/ಸನ್‌ಕರ್ ವಿವಿಸಸಂ/08–09 ಸಿಆರ್44. ದಿನಾಂಕ:10.12.2008.

2) ಜನತಾ ವಾಣಿ ಪತ್ರಿಕಾ ಪ್ರಕಟಣೆ ದಿನಾಂಕ:01.08.2008.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಮಂಡಳಿ ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ಪತ್ರಿಕಾ ಪ್ರಕಟಣೆ ನೀಡಿದ್ದು ಸಂಘವು ಅಸ್ತಿತ್ವದಲ್ಲಿರದ ಬಗ್ಗೆ ಮಹಜರು ಮಾಡಿಸಿ, ಕಾರಣ ಸಂಬಂಧಿಸಿದ ನಿರ್ದೇಶಕರಿಗೆ ನೋಟೀಸ್ ಜಾರಿ ಮಾಡಿಸಲು ಸಾಧ್ಯವಾಗಿರುವುದಿಲ್ಲವೆಂದು, ಉಲ್ಲೇಖ (1)ರ ಪತ್ರ ದಿನಾಂಕ:10.12.2008ರಲ್ಲಿ ವರದಿ ಸಲ್ಲಿಸಿರುತ್ತಾರೆ. ಪತ್ರಿಕಾ ಪ್ರಕಟಣೆಗೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅದೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

### ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್–27/2008–09, ದಿನಾಂಕ:16ನೇ ಡಿಸೆಂಬರ್, 2008

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸನ್‌ಕೇರ್ ವಿವಿಧೋದ್ದೇಶ ಸಹಕಾರ ಸಂಘ ನಿ., ದಾವಣಗೆರೆ, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, ವೃತ್ತ–2, ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ, ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:16.12.2008ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.57

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕುರಡಿ, ಕಿತ್ತೂರು–ಅಂಚೆ, ದಾವಣಗೆರೆ–ತಾ: ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ: ಸನಿ31/ಸ್ಥಗಿತ/ಎಂಪಿಸಿಎಸ್ ಕುರಡಿ/08–09, ಸಿಆರ್.45, ದಿನಾಂಕ:10.12.2008.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಮಂಡಳಿ ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಸಂಘವು

ಅಸ್ತಿತ್ವದಲ್ಲಿರದ ಬಗ್ಗೆ ಮಹಜರು ಮಾಡಿಸಿ, ಕಾರಣ ಸಂಬಂಧಿಸಿದ ನಿರ್ದೇಶಕರಿಗೆ ನೋಟೀಸ್ ಜಾರಿ ಮಾಡಿಸಲು ಸಾಧ್ಯವಾಗಿರುವುದಿಲ್ಲವೆಂದು, ಉಲ್ಲೇಖ (1)ರ ಪತ್ರ ದಿನಾಂಕ:10.12.2008ರಲ್ಲಿ ವರದಿ ಸಲ್ಲಿಸಿರುತ್ತಾರೆ. ಪತ್ರಿಕಾ ಪ್ರಕಟಣೆಗೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅದೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್-28/2008-09, ದಿನಾಂಕ:16ನೇ ಡಿಸೆಂಬರ್, 2008**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಹಾಲು ಉತ್ಪಾದಕರ ಸಹಕಾರ ಸಂಘ ನಿ. ಕುರಡಿ, ಕಿತ್ತೂರು-ಅಂಚೆ, ದಾವಣಗೆರೆ-ತಾ, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, ವೃತ್ತ-2, ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ, ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:16.12.2008ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.58

**ಕೃಷಿ ಮತ್ತು ತೋಟಗಾರಿಕೆ ಇಲಾಖೆ**

**ತಿದ್ದುಪಡಿ**

**ಸಂಖ್ಯೆ: ಕೃತೋಇ 146 ಕೃಪವ 2008, ಬೆಂಗಳೂರು, ದಿನಾಂಕ:30ನೇ ಸೆಪ್ಟೆಂಬರ್, 2008**

ಸರ್ಕಾರದ ಅಧಿಸೂಚನೆ ಸಂಖ್ಯೆ; ಕೃತೋಇ 91 ಕೃಪಸೇ 2006, ದಿನಾಂಕ:30.08.2008ರ ಅನುಬಂಧ-1ರ ಕಲಂ 6ರಲ್ಲಿ ಸೂಚಿಸಿರುವ ನೇಮಕಾತಿ ಮಾಡಿದ ಸ್ಥಳಗಳನ್ನು ಹಾಗೂ ಇದೇ ಸಂಖ್ಯೆಯ ದಿನಾಂಕ:15.09.2008ರ ಅಧಿಸೂಚನೆಯ ಕಲಂ 5ರಲ್ಲಿನ ಸ್ಥಳಗಳನ್ನು ಈ ಕೆಳಕಂಡ ಅಭ್ಯರ್ಥಿಗಳಿಗೆ ಸಂಬಂಧಪಟ್ಟಂತೆ ಅವರುಗಳ ಹೆಸರಿನ ಮುಂದೆ ಕಲಂ -5ರಲ್ಲಿ ತಿಳಿಸಿರುವಂತೆ ತಿದ್ದಿ ಓದಿಕೊಳ್ಳುವುದು.

| ಕ್ರ. ಸಂ. | ಆಯ್ಕೆಪಟ್ಟಿ ಕ್ರ.ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ | ದಿ:30.08.2008 & 15.09.2008ರ ಅಧಿಸೂಚನೆಯಲ್ಲಿ ಸೂಚಿಸಿರುವ ಸ್ಥಳ | ತಿದ್ದಿ ಓದಿಕೊಳ್ಳಬೇಕಾಗಿರುವ ಸ್ಥಳ |
|---|---|---|---|---|
| 1. | 227 | Shilpa G.K.<br>D/o Kalegowda. G.M.<br>Goravale, Dudda Hobli, Mandya Tq: Dist-571405. | RSK, Hanooru, O/o Asst. Director of Agriculture, Kollegal Taluk. | RSK, Jayapura O/o Asst. Director of Agriculture, Mysore Taluk. |
| 2. | 311 | Habeeba Tabassum Rahamniyavila, 4th Cross, Siddaganga Extension, Tumkur-572102 | RSK I.D.Halli, O/o Asst. Director of Agriculture, Madhugiri Taluk | RSK, Hebbur, O/o Asst. Director of Agriculture, Tumkur Taluk. |
| 3. | 356 | Pushpa R.N.<br>No.179, 9th C Main Road, Vijayanagar, Bangalore-40 | RSK, Keragodu, O/o Asst. Director of Agriculture, Mandya Taluk. | RSK, Kasaba, O/o Asst. Director of Agriculture, Ramanagar Taluk.<br>(ಶ್ರೀ ಹೆಚ್. ಹುಚ್ಚೀರಯ್ಯನವರ ಮುಂಬಡ್ತಿಯಿಂದ ತೆರವಾದ ಜಾಗಕ್ಕೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್.59

## ಕರ್ನಾಟಕ ಲೋಕಸೇವಾ ಆಯೋಗದ ನಡವಳಿಗಳು, ಬೆಂಗಳೂರು

**ವಿಷಯ:** ಕರ್ನಾಟಕ ಲೋಕಸೇವಾ ಆಯೋಗವು ದಿನಾಂಕ:22.06.2008ರಂದು ನಡೆಸಿದ ಕಿರಿಯ ಸಹಾಯಕ/ ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯ ಅಭ್ಯರ್ಥಿಗಳಾದ ಶ್ರೀ ಆನಂದ್ ಕುಮಾರ್, ಶ್ರೀ ಇಸಾಕ್ ಅಹಮದ್ ಕಂದಗಲ್ ಮತ್ತು ಶ್ರೀ ಆನಂದ ಬಾಸುತ್ಕರ್‌ರವರ ವಿರುದ್ಧದ ದುರಾಚಾರ ಪ್ರಕರಣಗಳ ಬಗ್ಗೆ.

**ಓದಲಾಗಿದೆ:**

1) ಶ್ರೀಮತಿ ಪಿ.ಕೆ. ಕುಲಕರ್ಣಿ, ಉಪಪ್ರಾಚಾರ್ಯರು, ಪಿ.ಡಿ.ಜೆ. ಪದವಿ ಪೂರ್ವ ಮಹಾವಿದ್ಯಾಲಯ, ವಿಜಾಪುರ, ರವರ ವರದಿ ದಿನಾಂಕ:22.06.2008.
2) ಪ್ರಾಂಶುಪಾಲರು, ಆಲ್‌ಶರೆ ವಿಜ್ಞಾನ ಪದವಿ ಪೂರ್ವ ಕಾಲೇಜು, ಗುಲ್ಬರ್ಗಾ ರವರ ವರದಿ ದಿನಾಂಕ:22.06.2008.
3) ಈ ಕಛೇರಿಯ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇ(3)2087/08–09, ದಿನಾಂಕ:07.07.2008.
4) ಈ ಕಛೇರಿಯ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇ(3)2137/08–09, ದಿನಾಂಕ:19.08.2008.
5) ಈ ಕಛೇರಿಯ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇ(3)2165/08–09, ದಿನಾಂಕ:22.08.2008.
6) ಶ್ರೀ ಆನಂದ್ ಕುಮಾರ್‌ರವರ ಸಮಜಾಯಿಷಿ ದಿನಾಂಕ:24.07.2008.
7) ಶ್ರೀ ಇಸಾಕ್ ಅಹಮದ್ ಕಂದಗಲ್‌ರವರ ಸಮಜಾಯಿಷಿ ದಿನಾಂಕ:22.08.2008.
8) ಶ್ರೀ ಆನಂದ್ ಬಾಸುತ್ಕರ್‌ರವರ ಸಮಜಾಯಿಷಿ ದಿನಾಂಕ:20.09.2008.

**ಪ್ರಸ್ತಾವನೆ:**

ದಿನಾಂಕ:22.06.2008ರಂದು ನಡೆದ ಕಿರಿಯ ಸಹಾಯಕ/ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆ ಸಮಯದಲ್ಲಿ 03 ದುರಾಚಾರ ಪ್ರಕರಣಗಳು ವರದಿಯಾಗಿದ್ದು, ಅವುಗಳ ವಿವರ ಹೀಗಿದೆ:

1) ಪಿ.ಡಿ.ಜೆ. ಮಹಾವಿದ್ಯಾಲಯ, ವಿಜಾಪುರದ ಉಪ ಪ್ರಾಚಾರ್ಯರು ಓದಲಾದ 1ರ ವರದಿಯಲ್ಲಿ ರಿ.ನಂ.539356ರಲ್ಲಿ ಪರೀಕ್ಷೆ ಬರೆದಿದ್ದ ಶ್ರೀ ಆನಂದ್ ಬಾಸುತ್ಕರ್ ಎಂಬ ಅಭ್ಯರ್ಥಿ ಸಾಮಾನ್ಯ ಕನ್ನಡ ಪರೀಕ್ಷೆ ಮುಗಿದ ನಂತರ ಓ.ಎಂ.ಆರ್. ಉತ್ತರ ಹಾಳೆಯನ್ನು ಕೊಠಡಿ ಪರಿವೀಕ್ಷಕರಿಗೆ ಹಿಂತಿರುಗಿಸದೆ ತೆಗೆದುಕೊಂಡು ಹೋಗಿದ್ದು, ಈ ವಿಷಯ ತಿಳಿದು ಬಂದ ಕೂಡಲೇ ಪರೀಕ್ಷಾ ಕೇಂದ್ರದ ಮೇಲ್ವಿಚಾರಕರು ಆಯೋಗದ ಕಛೇರಿಯನ್ನು ಸಂಪರ್ಕಿಸಿ ಅಭ್ಯರ್ಥಿಯ ವಿಳಾಸ ಹಾಗೂ ದೂರವಾಣಿ ಸಂಖ್ಯೆಯನ್ನು ಪಡೆದು ಅದರ ಮೂಲಕ ಅಭ್ಯರ್ಥಿಯನ್ನು ಸಂಪರ್ಕಿಸಿ ಈ ಬಗ್ಗೆ ಅಭ್ಯರ್ಥಿಯಿಂದ ಲಿಖಿತ ಹೇಳಿಕೆ ಪಡೆದು ಓ.ಎಂ.ಆರ್. ಉತ್ತರ ಹಾಳೆಯನ್ನು ಅಭ್ಯರ್ಥಿಯಿಂದ ಪಡೆದಿರುವುದಾಗಿ ತಿಳಿಸಿದ್ದರು.

2) ಗುಲ್ಬರ್ಗಾದ ಆಲ್‌ಶರೆ ವಿಜ್ಞಾನ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರು ಓದಲಾದ 2ರ ವರದಿಯಲ್ಲಿ ರಿ.ನಂ.691927ರ ಅಭ್ಯರ್ಥಿ ಶ್ರೀ ಆನಂದ್ ಕುಮಾರ್‌ರವರು ಪ್ರಶ್ನೆ ಪತ್ರಿಕೆಯನ್ನು ಪರೀಕ್ಷಾ ಕೊಠಡಿಯಿಂದ ಹೊರಹಾಕಿದ್ದ ಕಾರಣ ಅವರನ್ನು ಪೊಲೀಸ್ ವಶಕ್ಕೆ ಕೊಟ್ಟು ಪರೀಕ್ಷೆಗೆ ಅವಕಾಶ ನೀಡಿರುವುದಿಲ್ಲ ಎಂದು ತಿಳಿಸಿ ಇವರಿಂದ ವಶಪಡಿಸಿಕೊಂಡಿದ್ದ ಪ್ರವೇಶ ಪತ್ರ, ಉತ್ತರ ಹಾಳೆ ಹಾಗೂ ಪ್ರಶ್ನೆ ಪತ್ರಿಕೆಯನ್ನು ಕಳುಹಿಸಿದ್ದರು.

3) ಬೆಂಗಳೂರಿನ ಜೆ.ಎಸ್.ಎಸ್. ಕಂಪೋಸಿಟ್ ಪಿ.ಯು. ಕಾಲೇಜು ಪರೀಕ್ಷಾ ಕೇಂದ್ರದಲ್ಲಿ ರಿ.ನಂ.409382ರಲ್ಲಿ ಪರೀಕ್ಷೆ ಬರೆದಿದ್ದ ಶ್ರೀ ಇಸಾಕ್ ಅಹಮದ್ ಕಂದಗಲ್ ಎಂಬ ಅಭ್ಯರ್ಥಿ ಸಾಮಾನ್ಯ ಕನ್ನಡ ಪರೀಕ್ಷೆ ಸಮಯದಲ್ಲಿ ಓ.ಎಂ.ಆರ್. ಹಾಳೆಯನ್ನು ಭರ್ತಿ ಮಾಡದೆ ಖಾಲಿಯಾಗಿ ಸಲ್ಲಿಸಿ ಅದರಲ್ಲಿ ದೂರವಾಣಿ ಸಂಖ್ಯೆ:9900346433 ಅನ್ನು ನಮೂದಿಸಿ ಈ ನಂಬರಿಗೆ ಸಂಪರ್ಕಿಸಿರಿ 2 ಲಕ್ಷ ಪಡೆಯಿರಿ ಎಂದು ಬರೆದಿರುವುದು ಕಂಡುಬಂದಿದೆ.

ಈ ಮೂರು ಪ್ರಕರಣಗಳಿಗೆ ಸಂಬಂಧಪಟ್ಟ ಅಭ್ಯರ್ಥಿಗಳಿಗೆ ಓದಲಾದ 3 ರಿಂದ 5ರ ಕಾರಣಕೇಳುವ ನೋಟೀಸುಗಳನ್ನು ಜಾರಿ ಮಾಡಿ ಅವರುಗಳಿಂದ ಲಿಖಿತ ಮೂಲಕ ಸಮಜಾಯಿಷಿ ಸಲ್ಲಿಸಲು ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಅಭ್ಯರ್ಥಿಗಳು ಸಲ್ಲಿಸಿರುವ ಓದಲಾದ 6 ರಿಂದ 8ರ ಸಮಜಾಯಿಷಿಯಲ್ಲಿ ತಮ್ಮ ತಪ್ಪುಗಳನ್ನು ಒಪ್ಪಿಕೊಂಡು ಕ್ಷಮೆ ಕೋರಿದ್ದಾರೆ.

ಈ ಎಲ್ಲಾ ಅಂಶಗಳನ್ನು ಹಾಗೂ ಸಂಬಂಧಪಟ್ಟ ದಾಖಲೆಗಳನ್ನು ಪರಿಗಣಿಸಿ ಆಯೋಗವು ಈ ಮೂರು ಅಭ್ಯರ್ಥಿಗಳ ವಿರುದ್ಧ ಸೂಕ್ತ ದಂಡನೆಯನ್ನು ವಿಧಿಸುವ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಇ(3) 2274/ 2008–09/ ಪಿಎಸ್‌ಸಿ, ದಿನಾಂಕ:7ನೇ ಜನವರಿ, 2009**

ಕರ್ನಾಟಕ ನಾಗರೀಕ ಸೇವೆ (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು 1978 ಹಾಗೂ ಅದಕ್ಕೆ ಸಂಬಂಧಿಸಿದಂತೆ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93–94/ ಪಿಎಸ್‌ಸಿ, ದಿನಾಂಕ:14.07.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಆಪಾಧಿತ ಅಭ್ಯರ್ಥಿಗಳಾದ ಶ್ರೀ ಆನಂದ್‌ಕುಮಾರ್ (ರಿ.ನಂ.691927) ಶ್ರೀ ಇಸಾಕ್ ಅಹಮದ್ ಕಂದಗಲ್ (ರಿ.ನಂ.409382) ಮತ್ತು ಶ್ರೀ ಆನಂದ ಬಾಸುತ್ಕರ್ (ರಿ.ನಂ.539356) ರವರುಗಳಿಗೆ ದಿನಾಂಕ:22.06.2008ರಂದು

ಆಯೋಗವು ನಡೆಸಿದ ಕಿರಿಯ ಸಹಾಯಕ/ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯಿಂದ ಡಿಬಾರ್ ಮಾಡುವ ದಂಡನೆಯನ್ನು ಈ ಮೂಲಕ ವಿಧಿಸಿದೆ.

ಆಯೋಗದ ಆದೇಶದ ಮೇರೆಗೆ
**ವಿ.ಬಿ. ಪಾಟೀಲ್**
ಪಿ.ಆರ್.64 ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-06/2008-09, ದಿನಾಂಕ:11ನೇ ಡಿಸೆಂಬರ್, 2008**

**ವಿಷಯ:** ಸ್ಥಗಿತಗೊಂಡಿರುವ ಸಾಲೇಶ್ವರ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ:25.11.2008.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ:26.09.2008.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಮಂಡಳಿ ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ಪತ್ರಿಕಾ ಪ್ರಕಟಣೆ ನೀಡಿದ್ದು ಸಂಘವು ಅಸ್ತಿತ್ವದಲ್ಲಿರದ ಬಗ್ಗೆ ಮಹಜರು ಮಾಡಿಸಿ, ಕಾರಣ ಸಂಬಂಧಿಸಿದ ನಿರ್ದೇಶಕರಿಗೆ ನೋಟೀಸ್ ಜಾರಿ ಮಾಡಿಸಲು ಸಾಧ್ಯವಾಗಿರುವುದಿಲ್ಲವೆಂದು, ಉಲ್ಲೇಖ (1)ರ ಪತ್ರ ದಿನಾಂಕ:25.11.2008ರಲ್ಲಿ ವರದಿ ಸಲ್ಲಿಸಿರುತ್ತಾರೆ. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸಾಲೇಶ್ವರ ಪತ್ತಿನ ಸಹಕಾರ ಸಂಘ ನಿ. ಬೆಳ್ಳೂಳ್ಳಿಗಲ್ಲಿ, ದಾವಣಗೆರೆ, , ದಾವಣಗೆರೆ ತಾಲ್ಲೂಕು, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ, ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:11.12.2008ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್.2 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-07/2008-09, ದಿನಾಂಕ:11ನೇ ಡಿಸೆಂಬರ್, 2008**

**ವಿಷಯ:** ಸ್ಥಗಿತಗೊಂಡಿರುವ ರಾಹತ್ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ:10.11.2008.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ:26.09.2008.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಮಂಡಳಿ ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ಪತ್ರಿಕಾ ಪ್ರಕಟಣೆ ನೀಡಿದ್ದು ಸಂಘವು ಅಸ್ತಿತ್ವದಲ್ಲಿರದ ಬಗ್ಗೆ ಮಹಜರು ಮಾಡಿಸಿ, ಕಾರಣ ಸಂಬಂಧಿಸಿದ ನಿರ್ದೇಶಕರಿಗೆ ನೋಟೀಸ್ ಜಾರಿ ಮಾಡಿಸಲು ಸಾಧ್ಯವಾಗಿರುವುದಿಲ್ಲವೆಂದು, ಉಲ್ಲೇಖ (1)ರ ಪತ್ರ ದಿನಾಂಕ:10.11.2008ರಲ್ಲಿ ವರದಿ ಸಲ್ಲಿಸಿರುತ್ತಾರೆ. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ರಾಹತ್ ಪತ್ತಿನ ಸಹಕಾರ ಸಂಘ ನಿ. ವಿನೋಬನಗರ, ದಾವಣಗೆರೆ, ದಾವಣಗೆರೆ ತಾಲ್ಲೂಕು, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ, ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:11.12.2008ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.3

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

## ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-08/2008-09, ದಿನಾಂಕ:11ನೇ ಡಿಸೆಂಬರ್, 2008

**ವಿಷಯ:** ಸ್ಥಗಿತಗೊಂಡಿರುವ ಕರ್ನಾಟಕ ಮಂಡಕ್ಕಿ ಮತ್ತು ಅವಲಕ್ಕಿ ಉತ್ಪಾದಕರ ಕೈಗಾರಿಕಾ ಸಹಕಾರ ಸಂಘ ನಿ., ದಾವಣಗೆರೆ, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ:10.11.2008.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ:26.09.2008.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಮಂಡಳಿ ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ಪತ್ರಿಕಾ ಪ್ರಕಟಣೆ ನೀಡಿದ್ದು ಸಂಘವು ಅಸ್ತಿತ್ವದಲ್ಲಿರದ ಬಗ್ಗೆ ಮಹಜರು ಮಾಡಿಸಿ, ಕಾರಣ ಸಂಬಂಧಿಸಿದ ನಿರ್ದೇಶಕರಿಗೆ ನೋಟೀಸ್ ಜಾರಿ ಮಾಡಿಸಲು ಸಾಧ್ಯವಾಗಿರುವುದಿಲ್ಲವೆಂದು, ಉಲ್ಲೇಖ (1)ರ ಪತ್ರ ದಿನಾಂಕ:10.11.2008ರಲ್ಲಿ ವರದಿ ಸಲ್ಲಿಸಿರುತ್ತಾರೆ. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಕರ್ನಾಟಕ ಮಂಡಕ್ಕಿ ಮತ್ತು ಅವಲಕ್ಕಿ ಉತ್ಪಾದಕರ ಕೈಗಾರಿಕಾ ಸಹಕಾರ ಸಂಘ ನಿ., ದಾವಣಗೆರೆ, ದಾವಣಗೆರೆ ತಾಲ್ಲೂಕು, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ, ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:11.12.2008ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.4

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–09/2008–09, ದಿನಾಂಕ:11ನೇ ಡಿಸೆಂಬರ್, 2008**

**ವಿಷಯ:** ಸ್ಥಗಿತಗೊಂಡಿರುವ ಅನುಗ್ರಹ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ:10.11.2008.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ:26.09.2008.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಮಂಡಳಿ ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ಪತ್ರಿಕಾ ಪ್ರಕಟಣೆ ನೀಡಿದ್ದು ಸಂಘವು ಅಸ್ತಿತ್ವದಲ್ಲಿರದ ಬಗ್ಗೆ ಮಹಜರು ಮಾಡಿಸಿ, ಕಾರಣ ಸಂಬಂಧಿಸಿದ ನಿರ್ದೇಶಕರಿಗೆ ನೋಟೀಸ್ ಜಾರಿ ಮಾಡಿಸಲು ಸಾಧ್ಯವಾಗಿರುವುದಿಲ್ಲವೆಂದು, ಉಲ್ಲೇಖ (1)ರ ಪತ್ರ ದಿನಾಂಕ:10.11.2008ರಲ್ಲಿ ವರದಿ ಸಲ್ಲಿಸಿರುತ್ತಾರೆ. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಅನುಗ್ರಹ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ, ದಾವಣಗೆರೆ ತಾಲ್ಲೂಕು, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಶ್ರೀ ಎನ್.ಜಿ. ರುದ್ರಪ್ಪ, ಸಹಕಾರ ಸಂಘಗಳ ನಿರೀಕ್ಷಕರು, ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ, ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:11.12.2008ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.5

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮತ್ತು ವಸೂಲಾತಿ ಅಧಿಕಾರಿ ನಿಯಮ 441 ರವರ ಕಛೇರಿ, ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. ದೇವರಾಜ ಅರಸ್ ಬಡಾವಣೆ, ದಾವಣಗೆರೆ**

**ನಂ.ಎಬಿಎನ್/ಮಾರಾಟ/ ಸ್ಥಿರೀಕರಿಸುವ/1/08-09, ದಿನಾಂಕ:17ನೇ ಡಿಸೆಂಬರ್, 2008**

ವಿಷಯ: ಹಮ್‌ದರ್ದ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ನಿ. ದಾವಣಗೆರೆ ಇದರ ದಾವಾ ನಂ.196/02-03 ರಲ್ಲಿ ಪಡೆಯಲಾದ ಇ.ಪಿ.ನಂ.639/02-03 ಇದರ ಅಮಲ್ಜಾರಿ ಸಂಬಂಧ, ದಾವಣಗೆರೆ ಸಿಟಿ 5ನೇ ವಾರ್ಡ್, 10ನೇ ಡಿವಿಜನ್, ವಿನೋಬನಗರ, ಡೋರ್ ನಂ.1948/13ಬಿ ಅಳತೆ $12^1/_2$x35 ಅಡಿ ಸೊತ್ತಿನ ಮಾರಾಟ ಸ್ಥಿರೀಕರಣದ ಆದೇಶದ ಬಗ್ಗೆ.

ಉಲ್ಲೇಖ: ನಂ. ವಸೂಲಾತಿ/1/08-09, ದಿನಾಂಕ:16.12.2008ರ ಮಾರಾಟಾಧಿಕಾರಿ ನಿಯಮ 441 ಡಿ.ಡಿ.ಸಿ.ಸಿ. ಬ್ಯಾಂಕ್ ದಾವಣಗೆರೆ ರವರ ಪತ್ರ.

ಪ್ರಸ್ತಾವನೆ:

ಮಾರಾಟಾಧಿಕಾರಿ ನಿಯಮ 441 ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್, ದಾವಣಗೆರೆ ಇವರು ಶ್ರೀ ಜೆ.ವಿ. ಗುರುಸ್ವಾಮಿ ಬಿನ್ ವೆಂಕಟರಮಣಪ್ಪ ದಾವಣಗೆರೆ ರವರು ಸಾಲಕ್ಕೆ ಆಧಾರ ಮಾಡಿದ ಸೊತ್ತು, ದಾವಣಗೆರೆ ಸಿಟಿ 5ನೇ ವಾರ್ಡ್, 10ನೇ ಡಿವಿಜನ್, ವಿನೋಬನಗರ 3ನೇ ಮೇನ್, 8ನೇ ಕ್ರಾಸ್, ಡೋರ್ ನಂ. 1948/13ಬಿ ಅಳತೆ $12^1/_2$x35 ಅಡಿ ಪೂರ್ವ: ಇದೇ ನಿವೇಶನದ ಉಳಿದ ಜಾಗ, ಪಶ್ಚಿಮ: ನಿವೇಶನ ನಂ.14, ಉತ್ತರ: ಕ್ರಾಸ್ ರಸ್ತೆ, ದಕ್ಷಿಣಕ್ಕೆ: ನಿವೇಶನ ನಂ.7, ಈ ಸೊತ್ತನ್ನು ಹಮ್‌ದರ್ದ್ ಕ್ರೆಡಿಟ್ ಕೋ ಅಪರೇಟಿವ್ ಸೊಸೈಟಿ ನಿಯಮಿತ ದಾವಣಗೆರೆ, ಇವರಿಗೆ ಸದರಿಯವರಿಂದ ವಸೂಲಾಗಬೇಕಾದ ಮೊತ್ತದ ಸಂಬಂಧವಾಗಿ ಹೂಡಿದ ದಾವಾ ನಂ.196/02-03 ರಲ್ಲಿ ಡಿಕ್ರಿ ಪಡೆಯಲಾಗಿದ್ದು ಇದರ ಪ್ರಕಾರ ಇ.ಪಿ.ನಂ. 639/02-03 ರಲ್ಲಿ ಕ್ರಮ ಜರುಗಿಸಿ ದಿನಾಂಕ:07.11.2008 ರಂದು ಮೇಲ್ಕಾಣಿಸಿದ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ದಾವಣಗೆರೆ ಜಿಲ್ಲೆ, ದಾವಣಗೆರೆ ವಾಸಿಯಾದ ಶ್ರೀ ಜಿ. ವೆಂಕಟೇಶ್ ಬಿನ್ ಕೆಂಪಗಂಗಪ್ಪ, ಬೇತೂರು ರಸ್ತೆ, ಇಂದಿರಾನಗರ, ದಾವಣಗೆರೆ, ಇವರು ಹೆಚ್ಚಿನ ಬಿಡ್‌ನ್ನು ಮಾಡಿರುವುದರಿಂದ ಸದರಿಯವರಿಗೆ ಸೊಸೈಟಿಯ ಮಾರಾಟಾಧಿಕಾರಿಯವರು ಈ ಸ್ಥಿರಾಸ್ತಿಯನ್ನು ಹರಾಜಿನಲ್ಲಿ ಮಾರಾಟಮಾಡಿರುವುದರ ಸಂಬಂಧ ಈ ಸ್ಥಿರಾಸ್ತಿಗೆ ಸಂಬಂಧಿಸಿದವರು ಯಾವುದೇ ಆಕ್ಷೇಪಣೆಗಳನ್ನು ಇಲ್ಲಿಯವರೆಗೆ ಮಾಡದೇ ಇರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ನಿಯಮ 38(6) ರಡಿಯಲ್ಲಿ ಮಾರಾಟಾಧಿಕಾರಿ ನಿಯಮ 441, ಡಿ.ಡಿ.ಸಿ.ಸಿ. ಬ್ಯಾಂಕ್, ದಾವಣಗೆರೆ ಇವರು ದಿನಾಂಕ:07.11.2008ರಂದು ಬಹಿರಂಗ ಹರಾಜಿನಲ್ಲಿ ಶ್ರೀ ಜೆ.ವಿ. ಗುರುಸ್ವಾಮಿ ಬಿನ್ ವೆಂಕಟರಮಣಪ್ಪ ವಿನೋಬನಗರ, ದಾವಣಗೆರೆ ಇವರ ಸಾಲಕ್ಕೆ ಇವರು ಆಧಾರ ಮಾಡಿರುವ ಸೊತ್ತು, ದಾವಣಗೆರೆ ಸಿಟಿ, 5ನೇ ವಾರ್ಡ್, 10ನೇ ಡಿವಿಜನ್, ವಿನೋಬನಗರ, 3ನೇ ಮೈನ್, 8ನೇ ಕ್ರಾಸ್, ಡೋರ್ ನಂ.1948/ಬಿ, ಅಳತೆ $12^1/_2$x35 ಅಡಿ ಸೊತ್ತನ್ನು ಶ್ರೀ ಜಿ. ವೆಂಕಟೇಶ್ ಬಿನ್ ಕೆಂಪಗಂಗಪ್ಪ, ಇಂದಿರಾನಗರ ಬೇತೂರು ರಸ್ತೆ, ದಾವಣಗೆರೆ, ಇವರಿಗೆ ಕ್ರಮವಾಗಿ ಒಟ್ಟು ರೂ.4,67,000-00 (ನಾಲ್ಕು ಲಕ್ಷದ ಅರವತ್ತೇಳು ಸಾವಿರ ರೂಪಾಯಿ)ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿರುವುದನ್ನು ಸ್ಥಿರೀಕರಿಸಿ ಈ ಮೂಲಕ ಸೇಲ್ ಸರ್ಟಿಫಿಕೇಟನ್ನು ಜಾರಿ ಮಾಡುವ ಸಂಬಂಧವಾಗಿ ಖರೀದಿದಾರರು ಹರಾಜಿನ ಮೊತ್ತಕ್ಕೆ ಸ್ಟ್ಯಾಂಪ್ ಪೇಪರ್ ಖರೀದಿಸಿ, ಈ ಆದೇಶ ತಲುಪಿದ 15 ದಿನಗಳೊಳಗಾಗಿ ಈ ಕೆಳಗೆ ಸಹಿ ಮಾಡಿರುವವರ ಸಮ್ಮುಖದಲ್ಲಿ ಹಾಜರಿಪಡಿಸಲು ಈ ಆದೇಶವನ್ನು ದಿನಾಂಕ:17.12.2008ರಂದು ನನ್ನ ಸ್ವಹಸ್ತ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಜಾರಿ ಮಾಡಿರುತ್ತೇನೆ.

ಜಿ. ವೆಂಕಟೇಶ್ ಬಿನ್ ಕೆಂಪಗಂಗಪ್ಪ, ಬೇತೂರು ರಸ್ತೆ, ಇಂದಿರಾನಗರ, ದಾವಣಗೆರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾತಿ ಅಧಿಕಾರಿ ನಿ., 441, ದಾವಣಗೆರೆ ಜಿಲ್ಲಾ
ಕೇಂದ್ರ ಸಹಕಾರ ಬ್ಯಾಂಕ್ ನಿ., ದಾವಣಗೆರೆ.

ಪಿ.ಆರ್.7

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-1, ಬಳ್ಳಾರಿ**

**ಪ್ರಕರಣ ಸಂಖ್ಯೆ: ಕಾನಪ:530:08:ಎಫ್/1448-49, ದಿನಾಂಕ:3ನೇ ಡಿಸೆಂಬರ್, 2008**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಅನುಸೂಯಮ್ಮ ಗಂ: ಲೇಟ್ ಗಂಗಾಧರ, ವಯಸ್ಸು:38 ವರ್ಷ, ವೃತ್ತಿ: ಮನೆಕೆಲಸ. | | 1) ಶ್ರೀ ಎಲ್.ವಿ. ಕೃಷ್ಣಮೋಹನ್, ತಂ: ಲೇಟ್ ಎಲ್. ವೆಂಕಟೇಶ್ವರರಾವ್, ಲಾರಿ ಮಾಲೀಕರು, ಸಂಖ್ಯೆ: ಕೆಎ-34:9806, 3ನೇ ಮುಖ್ಯರಸ್ತೆ, 4ನೇ ಕ್ರಾಸ್, ಶಾರದ ವಿದ್ಯಾಪೀಠ ಶಾಲೆಯ ಎದುರುಗಡೆ, ಸತ್ಯನಾರಾಯಣ ಪೇಟೆ, ಬಳ್ಳಾರಿ. |

2) ಟಿ. ಲಲಿತಮ್ಮ ತಂ: ಲೇಟ್ ಗಂಗಾಧರಪ್ಪ, ವಯಸ್ಸು: 20 ವರ್ಷ, ವೃತ್ತಿ ಏನೂ ಇಲ್ಲ.
ಇಬ್ಬರ ವಾಸ: ತಮ್ಮೇನಹಳ್ಳಿ, ಮೊಳಕಾಲ್ಮೂರ್ (ತಾ), ಚಿತ್ರದುರ್ಗ (ಜಿ) ಪ್ರಸ್ತುತ, ವಾಸ: ಬಾಲಭಾರತಿ ಶಾಲೆ ಹತ್ತಿರ, ಗಾಂಧಿನಗರ, ಬಳ್ಳಾರಿ.

2) ವಿಭಾಗೀಯ ವ್ಯವಸ್ಥಾಪಕರು, ಮೆ: ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಪಾರ್ವತಿ ನಗರ, ಬಳ್ಳಾರಿ.

**ಪ್ರಕಟಣೆ**

ಸದರಿ 1 ಮತ್ತು 2ನೇ ಅರ್ಜಿದಾರರು ತಾವು ಮೃತನ ಹೆಂಡತಿ ಮತ್ತು ಮಗಳಾಗಬೇಕೆಂದು ವಾರಸುದಾರರು ಹಾಗೂ ಶಾಸನಬದ್ಧ ವಾರಸುದಾರರೆಂದು, ವಾಹನ ಸಂಖ್ಯೆ: ಕೆಎ–34:9806 ರಲ್ಲಿ ಕ್ಲೀನರ್‌ನಾಗಿ ಕೆಲಸ ಮಾಡುತ್ತಿದ್ದಾಗ ಅಪಘಾತವಾಗಿ ಮೃತ ಪಟ್ಟಿರುತ್ತಾನೆಂದು, ಸದರಿ ಲಾರಿಗೆ ಪಾರ್ಸಲ್‌ಗೂಡ್ಸ್ ಸಾಮಾನುಗಳನ್ನು ಲೋಡ್‌ಮಾಡಿ ಲಾರಿಗೆ ಬಿಗಿಯಾಗಿ ಹಗ್ಗವನ್ನು ಕಟ್ಟುತ್ತಿದ್ದಾಗ ತುಮಕೂರು ಕಡೆಯಿಂದ ಒಂದುಲಾರಿ ಚಾಲಕ ವೇಗವಾಗಿ ಓಡಿಸಿಕೊಂಡು ಬಂದು ಲಾರಿ ಬಲಭಾಗಕ್ಕೆ ಡಿಕ್ಕಿ ಹೊಡಿಸಿದ್ದರ ಪರಿಣಾಮ ಮೃತ ಗಂಗಾಧರ್‌ಗೆ ಬಲವಾದ ಪೆಟ್ಟುಬಿದ್ದು ಸ್ಥಳದಲ್ಲಿ ಮೃತಪಟ್ಟಿರುತ್ತಾನೆಂದು ತಿಳಿಸುತ್ತಾ ಮೃತನ ಮರಣದ ಪರಿಹಾರವಾಗಿ ನ್ಯಾಯಾಲಯದಲ್ಲಿ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ಮೃತನಿಗೆ ಸಂಬಂಧಪಟ್ಟಂತೆ ಬೇರೆ ಯಾರಾದರೂ ವಾರಸುದಾರರಿದ್ದಲ್ಲಿ, ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಸಂಬಂಧವಾಗಿ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಹಾಕಿದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕಾಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ
ಆಯುಕ್ತರು, ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ–1, ಬಳ್ಳಾರಿ**
**ಪ್ರಕರಣ ಸಂಖ್ಯೆ: ಕಾನಪ:560:08:ಎಫ್/1525–26, ದಿನಾಂಕ:16ನೇ ಡಿಸೆಂಬರ್, 2008**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1) ಶ್ರೀಮತಿ ಭೀಮಲಿಂಗಮ್ಮ ಗಂಡ: ಲೇಟ್ ಈರಪ್ಪ ಅಲಿಯಾಸ್ ಈರಣ್ಣ, ವಯಸ್ಸು:48 ವರ್ಷ, ವೃತ್ತಿ: ಗೃಹಿಣಿ (ಮೃತನ ಹೆಂಡತಿ)
2) ವೀರಾಂಜನೇಯ ಅಲಿಯಾಸ್ ನಿರಂಜನ್ ತಂ: ಲೇಟ್ ಈರಪ್ಪ ಅಲಿಯಾಸ್ ಈರಣ್ಣ, ವಯಸ್ಸು:30 ವರ್ಷ (ಮೃತನ ಮಗ)
3) ಶ್ರೀ ನಾಗರಾಜ್ ತಂ: ಲೇಟ್ ಈರಪ್ಪ ಅಲಿಯಾಸ್ ಈರಣ್ಣ, ವಯಸ್ಸು:28 ವರ್ಷ (ಮೃತನ ಮಗ)

1) ದಿ ಮ್ಯಾನೇಜರ್, ಮೆ: ತುಂಗಭದ್ರ ಜಿನ್ನಿಂಗ್ ಅಂಡ್ ಪ್ರಸ್ಸಿಂಗ್ ಫ್ಯಾಕ್ಟರಿ, ಅಂದ್ರಾಳ ರೋಡ್, ಬಳ್ಳಾರಿ.
2) ಡಿವಿಜನಲ್ ಮ್ಯಾನೇಜರ್, ಮೆ: ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಬಳ್ಳಾರಿ.

**ಪ್ರಕಟಣೆ**

ಸದರಿ 1 ರಿಂದ 3ರವರೆಗಿನ ಅರ್ಜಿದಾರರಾದ ಶ್ರೀಮತಿ ಭೀಮಲಿಂಗಮ್ಮ, ವೀರಾಂಜನೇಯ ಅಲಿಯಾಸ್ ನಿರಂಜನ್ ಮತ್ತು ನಾಗರಾಜ್ ಇವರು ಮೃತ ಈರಪ್ಪ ಅಲಿಯಾಸ್ ಈರಣ್ಣನ ಹೆಂಡತಿ, ಮಕ್ಕಳಾಗಬೇಕೆಂದು, ವಾರಸುದಾರರು ಹಾಗೂ ವಾರಸುದಾರರು ಹಾಗೂ ಅವಲಂಬಿತರೆಂದು ತಿಳಿಸುತ್ತಾ 1ನೇ ಪ್ರತಿವಾದಿಯವರ ಸದರಿ ಕಾರ್ಖಾನೆಯಲ್ಲಿ ಅನ್‌ಸ್ಕಿಲ್ಡ್ ವರ್ಕರ್ ಆಗಿ ಕೆಲಸ ಮಾಡುತ್ತಿದ್ದಾಗ ದಿನಾಂಕ:30.10.2008 ಸುಮಾರು 4.15 ಸಂಜೆ ಸಮಯದಲ್ಲಿ ಕೆಳಗೆ ಬಿದ್ದು ತೀವ್ರತರದ ಗಾಯಗಳಿಗೆ ಈಡಾಗಿ ವಿಮ್ಸ್ ಆಸ್ಪತ್ರೆ, ಬಳ್ಳಾರಿಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ ಫಲಕಾರಿಯಾಗದೆ ಅಂದೇ 6.15 ಸಂಜೆ ಮೃತಪಟ್ಟಿರುತ್ತಾನೆಂದು ತಿಳಿಸುತ್ತಾ, ಮೃತನ ಮರಣದ ಪರಿಹಾರವಾಗಿ ನ್ಯಾಯಾಲಯದಲ್ಲಿ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ಮೃತನಿಗೆ ಸಂಬಂಧಿಸಿದಂತೆ ಬೇರೆ ಯಾರಾದರೂ ವಾರಸುದಾರರಿದ್ದಲ್ಲಿ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಸಂಬಂಧವಾಗಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಹಾಕಿದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕಾಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ
ಆಯುಕ್ತರು, ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ–1, ಬಳ್ಳಾರಿ**
**ಪ್ರಕರಣ ಸಂಖ್ಯೆ: ಕಾನಪ:557:08:ಎಫ್/1522–23, ದಿನಾಂಕ:16ನೇ ಡಿಸೆಂಬರ್, 2008**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1) ಶ್ರೀ ಶೇಖ್‌ಶಾವಲಿ ತಂದೆ: ಖಾಜಾ ಹುಸೇನ್ ವಯಸ್ಸು: 50 ವರ್ಷ, ವೃತ್ತಿ: ಅಗ್ರಿಕಲ್ಚರಲ್ ಕೂಲಿ ವಾಸ: ಸಿರುಗುಪ್ಪ (ಮೃತನ ತಂದೆ)
2) ಶ್ರೀಮತಿ ಫಾತೀಮ ಗಂಡ: ಶೇಖ್‌ಶಾವಲಿ, ವಯಸ್ಸು: 45 ವರ್ಷ, ವೃತ್ತಿ: ಗೃಹಿಣಿ, ವಾರ್ಡ್ ನಂ.10, ಸಿರುಗುಪ್ಪ (ಮೃತನ ತಾಯಿ)

1) ಮೆ: ಅರುಣ್ ಇಂಜಿನೀಯರಿಂಗ್ ಪ್ರಾಜೆಕ್ಟ್ಸ್ ಪ್ರೈ.ಲಿ., 5:2 ವಲಾ ಕ್ರಾಸ್, ಲಾಲ್‌ಬಾಗ್‌ರೋಡ್, 4ನೇ ಕ್ರಾಸ್, ಬೆಂಗಳೂರು.
2) ದಿ ಬ್ರಾಂಚ್ ಮ್ಯಾನೇಜರ್, ಮೆ: ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಪಾರ್ವತಿ ನಗರ, ಬಳ್ಳಾರಿ.

**ಪ್ರಕಟಣೆ**

ಸದರಿ ಅರ್ಜಿದಾರರಾದ ಶ್ರೀ ಶೇಖ್‌ಶಾವಲಿ ಮತ್ತು ಶ್ರೀಮತಿ ಫಾತೀಮ ಇವರು ಮೊಹಮ್ಮದ್ದ ಅಲಿಗೆ ತಂದೆ, ತಾಯಿ, ವಾರಸುದಾರರು ಮತ್ತು ಅವಲಂಬಿತರೆಂದು ತಿಳಿಸುತ್ತಾ 1ನೇ ಪ್ರತಿವಾದಿ ನಿರ್ದೇಶನದ ಮೇರೆಗೆ ದಿನಾಂಕ:02.08.2008 ರಂದು ಕರ್ತವ್ಯದ ಮೇಲಿದ್ದಾಗ 50 ಅಡಿ ಎತ್ತರದ ಟ್ಯಾಂಕ್ ಮೇಲಿನಿಂದ ಕಾಲು ಜಾರಿ ಕೆಳಗೆ ಬಿದ್ದು ಸ್ಥಳದಲ್ಲಿ ಮೃತಪಟ್ಟಿರುತ್ತಾನೆಂದು ಕೂಡಲೇ ಶ್ರೀನಿವಾಸಪುರ, ಕೋಲಾರ್ ಜಿಲ್ಲೆ, ಜನರಲ್ ಆಸ್ಪತ್ರೆ ಇಲ್ಲಿ ಪೋಸ್ಟ್‌ಮಾರ್ಟಂ ಮಾಡಿದ ನಂತರ ಬಾಡಿಯನ್ನು ಹಿಂದಿರುಗಿಸಿದ್ದರೆಂದು, ಮೃತನ ಮರಣದ ಪರಿಹಾರವಾಗಿ ನ್ಯಾಯಾಲಯದಲ್ಲಿ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ಮೃತನಿಗೆ ಸಂಬಂಧಿಸಿದಂತೆ ಬೇರೆ ಯಾರಾದರೂ ವಾರಸುದಾರರಿದ್ದಲ್ಲಿ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಸಂಬಂಧವಾಗಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಹಾಕಿದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕಾಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ
ಆಯುಕ್ತರು, ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ–1, ಬಳ್ಳಾರಿ**
**ಪ್ರಕರಣ ಸಂಖ್ಯೆ: ಕಾನಪ:508:08:ಎಫ್/1450–57, ದಿನಾಂಕ:3ನೇ ಡಿಸೆಂಬರ್, 2008**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1) ಶ್ರೀಮತಿ ಹಸೀನ ಬೇಗಂ ಗಂ: ನೂರ್‌ಮೊಹಮ್ಮದ್, ವ:28 ವರ್ಷ, ವೃ:ಗೃಹಿಣಿ, (ಮೃತನ ಹೆಂಡತಿ)
2) ಫೆರೂಜ್ ಖಾನ್ ತಂ: ನೂರ್‌ಮೊಹಮ್ಮದ್, ವಯಸ್ಸು:09 ವರ್ಷ, (ಮೃತನ ಮಗ)
3) ಸಬ್ರಿನ್ ತಂ: ನೂರ್‌ಮೊಹಮ್ಮದ್, ವಯಸ್ಸು:07 ವರ್ಷ, (ಮೃತನ ಮಗಳು)
4) ಸಾಬಿಜಾನ್ ತಂ: ನೂರ್‌ಮೊಹಮ್ಮದ್, ವಯಸ್ಸು:04 ವರ್ಷ, (ಮೃತನ ಮಗ)
5) ನಜಿಯತಂ ಲೇಟ್ ನೂರ್‌ಮಹಮ್ಮದ್ ವ:ಒಂದೂವರೆ ವರ್ಷ. (2 ರಿಂದ 5 ರವರೆಗಿನ ಅರ್ಜಿದಾರರು ಅಪ್ರಾಪ್ತರು, ಅವರ ನಿಗಾವಾನಿ ತಾಯಿ 1ನೇ ಅರ್ಜಿದಾರಳು)
ಎಲ್ಲರ ವಾಸ: 328–ಎ.ಎಸ್.ಯು.ಜಿ. ಹೈಸ್ಕೂಲ್, ಬಂಡಿಮೋಟ್, ನೂರಾನಿಹೋಟಲ್ ಹಿಂದೆ, ಬೆಂಗಳೂರು ರಸ್ತೆ, ಬಳ್ಳಾರಿ.
6) ಫಜಲ್ ಖಾನ್ ತಂ: ಸರ್ದಾರ್ ಖಾನ್ ವಯಸ್ಸು:55 ವರ್ಷ (ಮೃತನ ತಂದೆ) ಖಾಸೀಂಬೀ ತಂ: ಫಜಲ್‌ಖಾನ್, ವಯಸ್ಸು:50 ವರ್ಷ ಇಬ್ಬರ ವಾಸ: ಮೇಲಿನಂತೆ.

1) ರಮೇಶ್ ಪರಶುರಾಮ್ ಪುರಿಯ ತಂ: ಬಾಬುಲಾಲ್ ಪರಶುರಾಮ್‌ಪುರಿಯ, ಲಾರಿ ಮಾಲೀಕರು, ಸಂಖ್ಯೆ: ಕೆಎ–35–3707, 16:110, ಪರಶುರಾಮಪುರಿಯ ಕಾಂಪ್ಲೆಕ್ಸ್, ವಿಶಾಲ್ ಪ್ರತೀಕ್‌ಲಾಡ್ಜ್ ಎದುರುಗಡೆ, ಬಳ್ಳಾರಿ.
2) ದಿ ಮ್ಯಾನೇಜರ್, ಐ.ಸಿ.ಐ.ಸಿ.ಐ. ಲೋಂಬಾರ್ಡ್, ಮೋಟಾರ್ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ.

**ಪ್ರಕಟಣೆ**

ಸದರಿ 1 ರಿಂದ 7ರವರೆಗಿನ ಅರ್ಜಿದಾರರೆಲ್ಲರೂ ತಾವು ನೂರ್ ಮೊಹಮ್ಮದ್‌ಗೆ ಹೆಂಡತಿ, ಮಕ್ಕಳು ಹಾಗೂ ತಂದೆ–ತಾಯಿಗಳಾಗಬೇಕೆಂದು ಹಾಗೂ ಶಾಸನಬದ್ಧವಾರಸುದಾರರು, ಅವಲಂಬಿತರೆಂದು ತಿಳಿಸಿ ಪ್ರತಿವಾದಿ ಬಳಿ ಚಾಲಕನಾಗಿ ಕೆಲಸ ಮಾಡುತ್ತಿದ್ದು ದಿನಾಂಕ:29.08.2008ರಂದು ಅವರ ನಿರ್ದೇಶನದ ಮೇರೆಗೆ ಹಲಕುಂದಿಬಳಿ ರಸ್ತೆಯಲ್ಲಿ ತಗ್ಗು ಇದ್ದುದ್ದರಿಂದ ಬ್ರೇಕ್ ಹಾಕಲು ಪ್ರಯತ್ನಿಸಿದಾಗ ಕಂಟ್ರೋಲ್ ಆಗದೆ ಉರುಳಿಬಿದ್ದ ಪರಿಣಾಮ ಅಪಘಾತ ಸಂಭವಿಸಿ ತೀವ್ರತರದ ಗಾಯಗಳಿಗೀಡಾಗಿ ಸ್ಥಳದಲ್ಲಿ ಮೃತಪಟ್ಟಿರುತ್ತಾನೆಂದು ತಿಳಿಸುತ್ತಾ ಮೃತನ ಮರಣದ ಪರಿಹಾರವಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಈ ಸಂಬಂಧವಾಗಿ ಬೇರೆ ಯಾರಾದರೂ ವಾರಸುದಾರರಿದ್ದಲ್ಲಿ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಸಂಬಂಧವಾಗಿ ಆಕ್ಷೇಪಣೆಗಳು ತಮ್ಮವೇನಾದರೂ ಇದ್ದಲ್ಲಿ ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಹಾಕಿದ 30 ದಿನಗಳೊಳಗಾಗಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್.10

ಕಾರ್ಮಿಕಾಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ
ಆಯುಕ್ತರು, ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

**ವಾಣಿಜ್ಯ ತೆರಿಗೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಎಂಎಸ್‌ಸಿ/ಐಒ/ಸಿಆರ್–175/06–07, ದಿನಾಂಕ:7ನೇ ನವೆಂಬರ್, 2008**

1) ಮಾಹಿತಿ ಹಕ್ಕು ಅಧಿನಿಯಮ 2005, (2005ರ ಕೇಂದ್ರ ಕಾಯ್ದೆ ಸಂಖ್ಯೆ:22) ಅಡಿ ಈ ಹಿಂದೆ ಹೊರಡಿಸಲಾದ ಅಧಿಸೂಚನೆ ದಿನಾಂಕ:03.01.2007ರ ಕೋಷ್ಟಕದ ಎರಡನೇ ಕಾಲಂನ ಕ್ರಮಸಂಖ್ಯೆ (5)ರಲ್ಲಿ ಮಂಗಳೂರು ವಿಭಾಗೀಯ (ಆಡಳಿತ ಮತ್ತು ವಸೂಲಿ) ಮತ್ತು ಮಂಗಳೂರು ವಿಭಾಗೀಯ (ಜಾರಿ) ಕಛೇರಿಗಳಿಗೆ ಸಂಬಂಧಿಸಿದಂತೆ ಈ ಕೆಳಗಿನಂತೆ ಮಾರ್ಪಾಡು ಮಾಡಿ ಆದೇಶ ಹೊರಡಿಸಲಾಗಿದೆ.

2) ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 184 ಸಮಯ/2005, ದಿನಾಂಕ:22.09.2005ರ ಪ್ರಕಾರ ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿತವಾದ ಈ ಕೆಳಗೆ ಸಹಿ ಮಾಡಿದ ಅಧಿಕಾರಿಯು ಮಾಹಿತಿ ಹಕ್ಕು ಕಾಯ್ದೆ 2005, (2005ರ ಕೇಂದ್ರ ಕಾಯ್ದೆ ಸಂಖ್ಯೆ:22) ಸೆಕ್ಷನ್ 5(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮಂಗಳೂರು ವಿಭಾಗಕ್ಕೆ (ಆಡಳಿತ ಮತ್ತು ವಸೂಲಿ) ಸಂಬಂಧಿಸಿದಂತೆ, ಸಾರ್ವಜನಿಕ ಮಾಹಿತಿ ಅಧಿಕಾರಿಗಳಾಗಿ ನಿಯೋಜಿಸಲಾಗಿದ್ದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಕೇಂದ್ರ ಕಛೇರಿ) ಮತ್ತು ಪತ್ರಾಂಕಿತ ವ್ಯವಸ್ಥಾಪಕ ಹುದ್ದೆಯನ್ನು ಕ್ರಮವಾಗಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಜಾರಿ–4), ಮಂಗಳೂರು ಹಾಗೂ ವಾಣಿಜ್ಯ ತೆರಿಗೆ ಅಧಿಕಾರಿ (ಪತ್ರಾಂಕಿತ ವ್ಯವಸ್ಥಾಪಕರು), ಡಿ.ವಿ.ಓ. ಮಂಗಳೂರು, ಎಂದು ಮರು ನಾಮಕರಣ ಮಾಡಿರುವುದರಿಂದ, ಹಾಗೂ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಜಾರಿ) ಮಂಗಳೂರು ವಿಭಾಗ, ಮಂಗಳೂರು, ಈ ವಿಭಾಗೀಯ ಕಛೇರಿಯಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಕೇಂದ್ರ ಸ್ಥಾನ) ಹಾಗೂ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆ ಇಲ್ಲದಿರುವ ಕಾರಣದಿಂದ, ವಾಣಿಜ್ಯ ತೆರಿಗೆ ಅಧಿಕಾರಿ (ಜಾರಿ–3), ಮಂಗಳೂರು–ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಯವರನ್ನು ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ವಿಭಾಗೀಯ ಕಛೇರಿ (ಆಡಳಿತ ಮತ್ತು ವಸೂಲಿ), ಮಂಗಳೂರು ವಿಭಾಗ, ಮಂಗಳೂರು ಹಾಗೂ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ವಿಭಾಗೀಯ ಕಛೇರಿ (ಜಾರಿ), ಮಂಗಳೂರು– ಕಛೇರಿಗಳಲ್ಲಿ ಮಾಹಿತಿಯನ್ನು ಒದಗಿಸಲು ಮಾಹಿತಿ ಹಕ್ಕು ಅಧಿನಿಯಮದಡಿಯಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶ/ಅಧಿಸೂಚನೆ ಹೊರಡಿಸುವ ತನಕ ಕಾರ್ಯನಿರ್ವಹಿಸುವಂತೆ ನಿಯೋಜಿಸಲಾಗಿದೆ.

ವಾಣಿಜ್ಯ ತೆರಿಗೆ ಆಯುಕ್ತರು (ಕರ್ನಾಟಕ)

ಪಿ.ಆರ್.11

ಬೆಂಗಳೂರು.

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ**

**ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.25/2005–06, ದಿನಾಂಕ:16ನೇ ಡಿಸೆಂಬರ್, 2008**

**ವಿಷಯ:** ಶ್ರೀ ಸಿ.ಎನ್. ಮಂಜುನಾಥ್, ಬಾಂದು ಜವಾನರು, ತಹಶೀಲ್ದಾರ್ ಕಛೇರಿ, ಸಕಲೇಶಪುರ ಇವರ ವಿರುದ್ಧದ ಶಿಸ್ತು ಕ್ರಮ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:** 1) ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ಇವರ ಕಾರಣ ಕೇಳಿ ನೋಟೀಸು (ಆರೋಪ ಪಟ್ಟಿಯೊಂದಿಗೆ) ಸಂಖ್ಯೆ: ಸಿಬ್ಬಂದಿ.ಶಿಸ್ತು.ಅನಗೈ.32/2003–04, ದಿನಾಂಕ:29.03.2005.

2) ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿದ ಈ ಕಛೇರಿ ನಡವಳಿ ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.25/2005–06, ದಿನಾಂಕ:08.08.2006.

3) ವಿಚಾರಣಾಧಿಕಾರಿಗಳ ವರದಿ ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.25/2005–06, ದಿನಾಂಕ:24.11.2006.

4) ಈ ಕಛೇರಿಯ 2ನೇ ಕಾರಣ ಕೇಳಿ ನೋಟೀಸು ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.25/2005–06, ದಿನಾಂಕ:23.02.2007/11.08.2008.

**ಪ್ರಸ್ತಾವನೆ:**

ಶ್ರೀ ಸಿ.ಎನ್. ಮಂಜುನಾಥ, ಬಾಂದು ಜವಾನರು, ತಹಶೀಲ್ದಾರ್ ಕಛೇರಿ, ಸಕಲೇಶಪುರ ಆದ ಇವರನ್ನು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಹಾಸನ ಕಛೇರಿಯಿಂದ, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಮದ್ದೂರು ಮರುಭೂಮಾಪನ ಕಛೇರಿಗೆ ಕರ್ತವ್ಯ ನಿರ್ವಹಿಸಲು ನಿಯೋಜಿಸಿದ್ದು ನೌಕರರು ದಿನಾಂಕ:03.10.2003 ರಿಂದ 02.11.2004 ರವರೆಗೆ ಯಾವುದೇ ರಜೆ ಅರ್ಜಿ ಸಲ್ಲಿಸದೆ, ಸಕ್ಷಮ ಪ್ರಾಧಿಕಾರಿಯಿಂದ ಪೂರ್ವಾನುಮತಿ ಪಡೆಯದೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರು ಕಾರಣ ಕೇಳಿ ನೋಟೀಸನ್ನು ಆರೋಪ ಪಟ್ಟಿಯೊಂದಿಗೆ ದಿನಾಂಕ:29.03.2005 ರಂದು ಜಾರಿ ಮಾಡಿರುತ್ತಾರೆ. ನೌಕರರ ವಿರುದ್ಧ ಮಾಡಲಾದ ಆರೋಪಗಳನ್ನು ಈ ಕೆಳಕಂಡಂತೆ ಪುನರುಚ್ಚರಿಸಿದೆ. (ಸದರಿ ನೌಕರರನ್ನು ಇನ್ನು ಮುಂದೆ ಆಪಾದಿತ ನೌಕರರೆಂದು ಕರೆಯಲಾಗಿದೆ)

**ಆರೋಪ**

ಭೂದಾಖಲೆಗಳ ಸಹಾಯಕ ನಿರ್ದೇಶಕರು, ಹಾಸನ ಕಛೇರಿಯಿಂದ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಮದ್ದೂರು ಮರು ಭೂಮಾಪನ ಕಛೇರಿಗೆ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸಲು ಶ್ರೀ ಸಿ.ಎನ್. ಮಂಜುನಾಥ್, ಬಾಂದು ಜವಾನರಾದ ನಿಮ್ಮನ್ನು ನಿಯೋಜನೆ ಮಾಡಿದ್ದು, ಅವಧಿಯಲ್ಲಿ ದಿನಾಂಕ:03.10.2003 ರಿಂದ 02.11.2004 ರವರೆಗೆ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೆ, ಸಕ್ಷಮ ಪ್ರಾಧಿಕಾರಿಯವರಿಂದ ರಜೆ ಮಂಜೂರಾತಿಯನ್ನಾಗಲೀ, ಪೂರ್ವಾನುಮತಿಯನ್ನಾಗಲೀ ಪಡೆಯದೇ ಸರ್ಕಾರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರಿ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1957ರ ನಿಯಮ 106ಎ ಮತ್ತು 108ನ್ನು ಉಲ್ಲಂಘಿಸಿದಂತಾಗಿ ದುರ್ನಡತೆ ಎಸಗಿದಂತಾಗಿದೆ.

ಆ ಕಾರಣ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(I) (II) ಮತ್ತು (III)ನ್ನು ಉಲ್ಲಂಘಿಸಿದಂತಾಗಿದ್ದು, ಇದರಿಂದ ಈ ಆರೋಪ.

ಆಪಾದಿತ ನೌಕರರು ದಿನಾಂಕ:26.04.2005ರಂದು ನೋಟೀಸನ್ನು ಸ್ವೀಕರಿಸಿ ಯಾವುದೇ ಹೇಳಿಕೆಯನ್ನು ನೀಡದ ಕಾರಣ, ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯಲು ದಿನಾಂಕ:08.08.2006ರ ಈ ಕಛೇರಿ ನಡವಳಿಯಲ್ಲಿ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿದಂತೆ ವಿಚಾರಣಾಧಿಕಾರಿಗಳು ದಿನಾಂಕ:10.11.2006ರಂದು ವಿಚಾರಣೆ ಕರೆದಿದ್ದು, ಆಪಾದಿತರು ಆಪಾದನೆಗಳನ್ನು ಒಪ್ಪಿಕೊಂಡಿರುವ ಬಗ್ಗೆ ಲಿಖಿತ ಹೇಳಿಕೆಯನ್ನು ನೀಡಿರುವ ಹಿನ್ನಲೆಯಲ್ಲಿ ಆರೋಪಗಳು ಸಾಬೀತಾಗಿರುತ್ತವೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ಪಟ್ಟಿರುತ್ತಾರೆ. ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿ, ಈ ಕಛೇರಿಯಿಂದ ದಿನಾಂಕ:23.02.2007ರಂದು ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ. ಆದರೆ ಸದರಿ ನೋಟೀಸನ್ನು ಸ್ವೀಕರಿಸಿದ ಬಗ್ಗೆ ನೌಕರರಿಂದ ದ್ವಿಪ್ರತಿಯು ಸ್ವೀಕೃತವಾಗದ ಕಾರಣ, ಸದರಿ ನೋಟೀಸನ್ನು ಪುನಃ ದಿನಾಂಕ:11.08.2008 ರ ಪತ್ರದೊಂದಿಗೆ ಜಾರಿ ಮಾಡಿದ್ದು, ನೌಕರರು ದಿನಾಂಕ:28.08.2008ರಂದು ಸ್ವೀಕರಿಸಿ ಯಾವುದೇ ಹೇಳಿಕೆಯನ್ನು ನೀಡಿರುವುದಿಲ್ಲ.

ಆಪಾದಿತ ನೌಕರರು ಈ ಹಿಂದೆಯೂ (ದಿನಾಂಕ:06.11.1998ರಿಂದ 11.05.2000 ರವರೆಗೆ) ಅನಧಿಕೃತ ಗೈರು ಹಾಜರಾದ ಆರೋಪ ಕುರಿತು ಆರೋಪ ಸಾಬೀತಾಗಿದ್ದು, ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ಇವರ ನಡವಳಿ ಸಂಖ್ಯೆ: ಸಿಬ್ಬಂದಿ.ಶಿಸ್ತು.ಅನಗೈ–52/99–2000, ದಿನಾಂಕ:16.02.2000ರಲ್ಲಿ 5 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿರುತ್ತದೆ. ಹಾಗೂ ಸದರಿಯವರು ದಿನಾಂಕ:12.04.2007 ರಿಂದ 31.01.2008 ರವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ ಮತ್ತೊಂದು ಶಿಸ್ತು ಪ್ರಕರಣವು ಜಾರಿಯಲ್ಲಿದ್ದು, ಆಪಾದಿತರು ಕರ್ತವ್ಯಕ್ಕೆ ಪದೇ ಪದೇ ದೀರ್ಘಾವಧಿಯ ಅನಧಿಕೃತ ಗೈರು ಹಾಜರಾಗುವ ಪ್ರವೃತ್ತಿಯನ್ನು ಬೆಳೆಸಿಕೊಂಡು ಗಂಭೀರವಾದ ಕರ್ತವ್ಯ ಚ್ಯುತಿಯನ್ನು ಎಸಗುವುದನ್ನು ಪರಿಶೀಲಿಸಿದಾಗ, ಸದರಿಯವರಿಗೆ ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಯಾವುದೇ ಶ್ರದ್ಧೆ, ಆಸಕ್ತಿ ಇಲ್ಲದಿರುವುದು ಕಂಡು ಬರುತ್ತಿದ್ದು, ಆರೋಪ ಸಾಬೀತಾಗಿರುವ ಬಗ್ಗೆ ವಿಚಾರಣಾಧಿಕಾರಿಗಳ ವರದಿ, ವಿಚಾರಣಾ ವೇಳೆಯಲ್ಲಿ ಆಪಾದಿತರು ನೀಡಿದ ಹೇಳಿಕೆಯನ್ನು ಪರಿಶೀಲಿಸಿ, ಆಪಾದಿತರಿಗೆ ಕಠಿಣ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಸಿ.ಎನ್. ಮಂಜುನಾಥ, ಬಾಂದು ಜವಾನರವರು ದಿನಾಂಕ:03.10.2003 ರಿಂದ 02.11.2004ರವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದು, ಆರೋಪಿತ ನೌಕರರು

ಈ ಅಂಶವನ್ನು ಒಪ್ಪಿಕೊಂಡಿರುವ ಸಂದರ್ಭದಲ್ಲಿ ಸಾಬೀತಾಗಿರುತ್ತದೆ. ದಿನಾಂಕ:03.10.2003 ರಿಂದ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೆ, ಸರ್ಕಾರಿ ಕೆಲಸಕ್ಕೆ ದೀರ್ಘಕಾಲದವರೆಗೆ ಅನಧಿಕೃತ ಗೈರು ಹಾಜರಾಗಿರುವುದು ಕೆ.ಸಿ.ಎಸ್.ಆರ್. ನಿಯಮ 108ನ್ನು ಆಕರ್ಷಿಸಿರುವ ಹಿನ್ನಲೆಯಲ್ಲಿ ಆಪಾದಿತ ನೌಕರರು ಗಂಭೀರವಾದ ಕರ್ತವ್ಯ ಲೋಪ ಮತ್ತು ದುರ್ವರ್ತನೆ ಎಸಗಿದಂತಾಗಿರುತ್ತದೆ.

ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ 108ರ ಪ್ರಕಾರ, ಸರ್ಕಾರವು ಪ್ರಕರಣದ ವಿಶೇಷ ಸಂದರ್ಭಗಳಿಂದಾಗಿ ಅನ್ಯಥಾ ನಿರ್ಣಯಿಸದ ಹೊರತು 4 ತಿಂಗಳು ಹಾಗೂ ಹೆಚ್ಚಿನ ಅವಧಿಗೆ ರಜೆ ಪಡೆದುಕೊಳ್ಳದೇ ಕರ್ತವ್ಯಕ್ಕೆ ವಿಮುಖರಾಗಿ ಗೈರು ಹಾಜರಾಗುವ ಸರ್ಕಾರಿ ನೌಕರರನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರಲ್ಲಿ ನಮೂದಿಸಲಾದ ಕಾರ್ಯವಿಧಾನವನ್ನನುಸರಿಸಿ ಸೇವೆಯಿಂದ ವಜಾ ಮಾಡಬಹುದಾಗಿರುತ್ತದೆ ಅಥವಾ ಸೇವೆಯಿಂದ ತೆಗೆದು ಹಾಕಬಹುದಾಗಿರುತ್ತದೆ. ಆಪಾದಿತರಿಗೆ ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಆಸಕ್ತಿ ಇಲ್ಲದೆ ಪದೇ ಪದೇ ಗೈರು ಹಾಜರಾಗುವ ಪ್ರವೃತ್ತಿ ಹೊಂದಿದ್ದು, ಈ ಪ್ರಕರಣದಲ್ಲಿ ಆಪಾದಿತರು ಯಾವುದೇ ಪ್ರಬಲ ಕಾರಣವಿಲ್ಲದೇ, ಸರ್ಕಾರಿ ಕೆಲಸಕ್ಕೆ ಹಾಜರಾಗದೆ ದಿನಾಂಕ:03.10.2003 ರಿಂದ 02.11.2004ರವರೆಗೆ ಅನಧಿಕೃತವಾಗಿ ಗೈರು ಹಾಜರಾಗಿರುವುದು ತೀವ್ರತೆರನಾದ ದುರ್ವರ್ತನೆ ಆಗಿರುವುದರಿಂದ ಹಾಗೂ ಅವರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವ ಹಿನ್ನಲೆಯಲ್ಲಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(viii) ರೊಂದಿಗೆ ಓದಿಕೊಂಡ ನಿಯಮ 9(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರಾಜೀವ್ ಚಾವ್ಲಾ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಶ್ರೀ ಸಿ.ಎನ್. ಮಂಜುನಾಥ, ಬಾಂದು ಜವಾನರು, ತಹಶೀಲ್ದಾರ್ ಕಛೇರಿ, ಸಕಲೇಶಪುರ ಇವರನ್ನು ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ
ಪಿ.ಆರ್.12 ಮತ್ತು ಭೂದಾಖಲೆಗಳು, ಬೆಂಗಳೂರು.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on sale of 'old battery scrap' or condemned battery' or 'scrapped battery'.

**Ref:** Application Dated:01.09.2008 of Sri Abdul Rahim Proprietor, M/s H.T.M. Metal Mart, No.43, H. Ramaiah Lane, Seegebeli, Bangalore-53.

In its application cited above, Sri Abdul Rahim Proprietor, M/s H.T.M. Metal Mart, No.43, H. Ramaiah Lane, Seegebeli, Bangalore-53, has sought clarification regarding the rate of tax applicable on sale of 'old battery scrap' or condemned battery' or 'scrapped battery'

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.135/08-09, Dated:2nd December, 2008**

It is hereby clarified that 'old battery scrap' or 'condemned battery' or 'scrapped battery' is taxable at 12.5% under Section 4 (1)(b) of the KVAT Act, 2003.

**B.A. HARISH GOWDA**
PR-18 Commissioner of Commercial Taxes,
(Karnataka), Bangalore.

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ**
**ಸಂಖ್ಯೆ: ಸಿಬ್ಬಂದಿ.ಶಿಸ್ತು.(ಅಗೈಹಾ)30/05-06, ದಿನಾಂಕ:16ನೇ ಡಿಸೆಂಬರ್, 2008**

**ವಿಷಯ:** ಶ್ರೀ ನಾರಾಯಣ ದ್ವಿ.ದ.ಭೂಮಾಪಕರು, ತಹಶೀಲ್ದಾರ್ ಕಛೇರಿ, ಬೇಲೂರು ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತುಕ್ರಮ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆಯ ಕಾರಣ ಕೇಳಿ ನೋಟೀಸು (ಆರೋಪ ಪಟ್ಟಿಯೊಂದಿಗೆ) ದಿನಾಂಕ:09.08.2006.
2) ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿದ ಈ ಕಛೇರಿಯ ಸಮಸಂಖ್ಯೆಯ ಆದೇಶ ದಿನಾಂಕ:09.03.2007.
3) ವಿಚಾರಣಾಧಿಕಾರಿಗಳ ವರದಿ ಸಂಖ್ಯೆ: ಶಿಸ್ತು.ಅಗೈಹಾ.7/06-07, ದಿನಾಂಕ:13.02.2008.
4) ಈ ಕಛೇರಿಯ 2ನೇ ಕಾರಣ ಕೇಳಿ ನೋಟೀಸು ಸಮಸಂಖ್ಯೆ ದಿನಾಂಕ:09.06.2008.

**ಪ್ರಸ್ತಾವನೆ:**

ಶ್ರೀ ನಾರಾಯಣ, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್ ಕಛೇರಿ, ಬೇಲೂರು ಆದ ಇವರು ಈ ಹಿಂದೆ ತಾಲ್ಲೂಕು ಭೂಮಾಪನ ಕಛೇರಿ, ನಂಜನಗೂಡಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:30.10.2004 ರಿಂದ ದಿನಾಂಕ:10.05.2005 ರವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ ಭೂದಾಖಲೆಗಳ ಉಪ ನಿರ್ದೇಶಕರು, ಮೈಸೂರು ರವರು ನೌಕರರ ವಿರುದ್ಧ ಕ್ರಮ ಜರುಗಿಸಲು ಕೋರಿ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರನ್ನು ಕೋರಿದ್ದು, ಇಲಾಖೆಯು ಕಂದಾಯ ಇಲಾಖೆಯೊಡನೆ ಕಾರ್ಯವಿಲೀನಗೊಂಡ ಕಾರಣ, ಭೂದಾಖಲೆಗಳ ಜಂಟಿ ನಿರ್ದೇಶಕರ ಕಛೇರಿಗಳು ರದ್ದಾದ ಹಿನ್ನಲೆಯಲ್ಲಿ ಪ್ರಕರಣವು ಕೇಂದ್ರ ಕಛೇರಿಯಲ್ಲಿ ಸ್ವೀಕೃತಗೊಂಡಿದ್ದು, ಶ್ರೀ ನಾರಾಯಣ, ದ್ವಿತೀಯ ದರ್ಜೆ ಭೂಮಾಪಕರವರ ಅನಧಿಕೃತ ಗೈರು ಹಾಜರಿ ಮತ್ತು ಕರ್ತವ್ಯಲೋಪ ಕುರಿತು ಕಾರಣ ಕೇಳಿ ನೋಟೀಸನ್ನು (ಆರೋಪ ಪಟ್ಟಿಯೊಂದಿಗೆ) ಉಲ್ಲೇಖ (1) ರಂತೆ ಜಾರಿ ಮಾಡಲಾಗಿರುತ್ತದೆ.

ಸದರಿ ನೌಕರರ ವಿರುದ್ಧ ಮಾಡಲಾದ ಆರೋಪಗಳನ್ನು ಈ ಕೆಳಕಂಡಂತೆ ಪುನರುಚ್ಚರಿಸಿದೆ. (ಇನ್ನು ಮುಂದೆ ನೌಕರರನ್ನು ಆರೋಪಿತ ನೌಕರರೆಂದು ಕರೆಯಲಾಗಿದೆ)

**ಆರೋಪ-1**

ಶ್ರೀ ನಾರಾಯಣ, ಎರಡನೇ ದರ್ಜೆ ಭೂಮಾಪಕರು, ಹಾಲಿ ತಹಶೀಲ್ದಾರ್ ಕಛೇರಿ, ನಂಜನಗೂಡು ಆದ ನೀವು ಈ ಹಿಂದೆ ತಾಲ್ಲೂಕು ಭೂಮಾಪನ ಕಛೇರಿ, ನಂಜನಗೂಡಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:30.10.2004 ರಿಂದ 10.05.2005 ರವರೆಗೆ ಕಛೇರಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತೀರಿ. ನೀವು ಸಕ್ಷಮ ಪ್ರಾಧಿಕಾರಿಯಿಂದ ರಜೆ ಮಂಜೂರಾತಿಯನ್ನಾಗಲೀ, ಪೂರ್ವಾನುಮತಿಯನ್ನಾಗಲೀ ಪಡೆಯದೇ ಅನಧಿಕೃತ ಗೈರು ಹಾಜರಾಗಿ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 1957ರ ನಿಯಮ 106(ಎ) ಮತ್ತು ನಿಯಮ 108ಅನ್ನು ಉಲ್ಲಂಘಿಸಿ ದುರ್ನಡತೆ ಎಸಗಿದಂತಾಗಿರುವುದರಿಂದ ಹಾಗೂ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 1966ರ ನಿಯಮ 3(i) (ii) ಮತ್ತು (iii)ನ್ನು ಉಲ್ಲಂಘಿಸಿದ್ದು, ಈ ಮೂಲಕ ಶಿಸ್ತುಕ್ರಮಕ್ಕೆ ಅನುವು ಮಾಡಿಕೊಟ್ಟಿರುತ್ತೀರಿ. ಆ ಕಾರಣ ಈ ಆರೋಪ.

**ಆರೋಪ-2:**

ತಹಶೀಲ್ದಾರ್ ಕಛೇರಿ, ನಂಜನಗೂಡು ಇಲ್ಲಿ ಎರಡನೇ ದರ್ಜೆ ಭೂಮಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ನಾರಾಯಣ ಆದ ನೀವು ಈ ಹಿಂದೆ ತಾಲ್ಲೂಕು ಭೂಮಾಪನ ಕಛೇರಿ, ನಂಜನಗೂಡಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದುರಸ್ತಿ ಹಾಗೂ ಅಡವಿ ಕೆಲಸಕ್ಕಾಗಿ ಪಡೆದಿರುವ 22 ಕಡತಗಳನ್ನು ಯಾವುದೇ ಕೆಲಸ ನಿರ್ವಹಿಸದೇ, ಕಛೇರಿಗೂ ಹಿಂದಿರುಗಿಸದೇ ನಿಮ್ಮಲ್ಲಿಯೇ ಬಾಕಿ ಇಟ್ಟುಕೊಂಡಿರುತ್ತೀರಿ. ಆ ಕಾರಣ, ಕೇಂದ್ರ ಕಛೇರಿಯ ಸುತ್ತೋಲೆ ಸಂಖ್ಯೆ: ತಾಂ.ಅ:38/95-96, ದಿನಾಂಕ:21.12.1995ರ ಸೂಚನೆಗಳನ್ನು ಉಲ್ಲಂಘಿಸಿದಂತಾಗಿ ಕಡತಗಳನ್ನು ನಿಮ್ಮಲ್ಲಿಯೇ ಬಾಕಿ ಉಳಿಸಿಕೊಂಡು ಈ ಮೂಲಕ ಸಾರ್ವಜನಿಕರಿಗೆ ಅನಾನುಕೂಲ ಉಂಟಾಗಲು ಕಾರಣರಾಗಿರುತ್ತೀರಿ. ಆ ಕಾರಣ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(i) (ii) ಮತ್ತು (iii) ಅನ್ನು ಉಲ್ಲಂಘಿಸಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರನ್ವಯ ಶಿಸ್ತುಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುತ್ತೀರಾ. ಆದ ಕಾರಣ ಈ ಆರೋಪ.

ಸದರಿ ನೋಟೀಸನ್ನು ನೌಕರರು ದಿನಾಂಕ:13.12.2006ರಂದು ಸ್ವೀಕರಿಸಿ, ಯಾವುದೇ ರಕ್ಷಣಾ ಹೇಳಿಕೆಯನ್ನು ನೀಡದ ಕಾರಣ, ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯಲು ಉಲ್ಲೇಖ (2) ರ ಈ ಕಛೇರಿ ನಡವಳಿಯಲ್ಲಿ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿದಂತೆ, ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿರುತ್ತಾರೆ. ವಿಚಾರಣಾಧಿಕಾರಿಗಳು, ದಿನಾಂಕ:16.07.2007, 24.07.2007, 13.08.2007, 01.09.2007, 12.09.2007, 06.10.2007, 25.10.2007, 12.11.2007, 26.11.2007, 26.12.2007 ರಂದು ವಿಚಾರಣೆ ನಡೆಸಿದ್ದು, ದಿನಾಂಕ:24.07.2007, 13.08.2007 ಹಾಗೂ

ದಿನಾಂಕ:01.09.2007ರ ವಿಚಾರಣೆಗೆ ಮಾತ್ರ ಆಪಾದಿತ ನೌಕರರು ಹಾಜರಾಗಿ, ದಿನಾಂಕ:12.09.2007, 06.10.2007, 25.02.2007, 12.11.2007, 26.11.2007, 26.12.2007ರಂದು ನಡೆಸಿದ ವಿಚಾರಣೆಗೆ ಸಾಕ್ಷಿದಾರರು ಹಾಜರಾಗಿದ್ದು, ಆಪಾದಿತ ನೌಕರರು ಹಾಜರಾಗಿರುವುದಿಲ್ಲ. ಸಾಕ್ಷಿದಾರರನ್ನು ವಿಚಾರಣೆಗೆ ಒಳಪಡಿಸಿದ ಸಮಯದಲ್ಲಿ ಆರೋಪಿತರು ವಿಚಾರಣೆಗೆ ಹಾಜರಾಗದ ಕಾರಣ, ಏಕಪಕ್ಷೀಯವಾಗಿ ಕ್ರಮಕೈಗೊಂಡು ಸಾಕ್ಷ್ಯ ದಾಖಲೆಗಳ ಆಧಾರದ ಮೇಲೆ ಆರೋಪಗಳು ಸಾಬೀತಾಗಿರುತ್ತದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿರುತ್ತಾರೆ. ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿ ನೌಕರರಿಗೆ ಈ ಕಛೇರಿಯಿಂದ ದಿನಾಂಕ:09.06.2008 ರಂದು ಎರಡನೇ ಕಾರಣ ಕೇಳಿ ನೋಟೀಸು ಜಾರಿ ಮಾಡಿದ್ದು, ನೌಕರರು ದಿನಾಂಕ:18.08.2008ರಂದು ಸ್ವೀಕರಿಸಿ ಯಾವುದೇ ಹೇಳಿಕೆಯನ್ನು ನೀಡಿರುವುದಿಲ್ಲ.

ಆಪಾದಿತರ ನೌಕರರ ಸೇವಾ ವಿವರಗಳನ್ನು ಪರಿಶೀಲಿಸಲಾಗಿ, ದಿನಾಂಕ:24.06.2000 ರಂದು ಗ್ರೂಪ್ ಡಿ ಹುದ್ದೆಯಿಂದ ಎರಡನೇ ದರ್ಜೆ ಭೂಮಾಪಕರ ಹುದ್ದೆಗೆ ಬಡ್ತಿ ಪಡೆದಿದ್ದು, ಸದರಿಯವರ 2000–01, 2001–02, 2002–03, 2003–04ರ ಸಾಲಿನ ಕಾರ್ಯ ನಿರ್ವಹಣಾ ವರದಿಗಳನ್ನು ಪರಿಶೀಲಿಸಲಾಗಿ, ನೌಕರರ ಕೆಲಸ ಕಾರ್ಯಗಳು ಸಾಧಾರಣ ಮಟ್ಟಕ್ಕಿಂತ ಕಡಿಮೆ ಇರುವುದಾಗಿ ಮೌಲ್ಯಮಾಪನವಾಗಿದ್ದು, ಎರಡನೇ ದರ್ಜೆ ಭೂಮಾಪಕರ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಈವರೆಗೂ ಪಾಸು ಮಾಡಿರುವುದಿಲ್ಲ ಹಗೂ ಸದರಿಯವರ ಕರ್ತವ್ಯಕ್ಕೆ ಆಗಿಂದಾಗ್ಗೆ ದೀರ್ಘಾವಧಿಯ ಅನಧಿಕೃತ ಗೈರು ಹಾಜರಾಗುವ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದು, ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಯಾವುದೇ ಶ್ರದ್ದೆ, ಆಸಕ್ತಿ ಇಲ್ಲದಿರುವುದು ಕಂಡು ಬಂದಿರುವ ಹಿನ್ನೆಲೆಯಲ್ಲಿ ನೌಕರರಿಗೆ ಕಠಿಣ ದಂಡನೆ ವಿಧಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ನಾರಾಯಣ, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್ ಕಛೇರಿ, ಬೇಲೂರು ಇವರ ವಿರುದ್ಧ ಮಾಡಲಾದ ಆರೋಪಗಳನ್ನು ಪರಿಶೀಲಿಸಲಾಗಿ, ನೌಕರರು ದಿನಾಂಕ:30.10.2004 ರಿಂದ 10.05.2005 ರವರೆಗೆ ಅನಧಿಕೃತ ಗೈರು ಹಾಜರಾಗಿರುವುದು ಹಾಗೂ ಕರ್ತವ್ಯಲೋಪವೆಸಗಿರುವುದು ಸಾಕ್ಷಿ ದಾಖಲೆಗಳಿಂದ ಮತ್ತು ವಿಚಾರಣಾ ವರದಿಯಿಂದ ಸಾಬೀತಾಗಿರುತ್ತದೆ.

ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ 108ರನ್ವಯ ಸರ್ಕಾರವು ಪ್ರಕರಣದ ವಿಶೇಷ ಸಂದರ್ಭಗಳಿಂದಾಗಿ ಅನ್ಯಥಾ ನಿರ್ಣಯಿಸದ ಹೊರತು 4 ತಿಂಗಳು ಹಾಗೂ ಹೆಚ್ಚಿನ ಅವಧಿಗೆ ರಜೆ ಪಡೆದುಕೊಳ್ಳದೇ ಕರ್ತವ್ಯಕ್ಕೆ ಗೈರು ಹಾಜರಾಗುವ ಸರ್ಕಾರಿ ನೌಕರರು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರಲ್ಲಿ ನಮೂದಿಸಲಾದ ಕಾರ್ಯವಿಧಾನವನ್ನನುಸರಿಸಿ ಸೇವೆಯಿಂದ ವಜಾ ಮಾಡಬಹುದಾಗಿರುತ್ತದೆ ಅಥವಾ ಸೇವೆಯಿಂದ ತೆಗೆದು ಹಾಕಬಹುದಾಗಿರುತ್ತದೆ. ಈ ಪ್ರಕರಣದಲ್ಲಿ ಆರೋಪಿತ ನೌಕರರು ಯಾವುದೇ ಪ್ರಬಲವಾದ ಕಾರಣವಿಲ್ಲದೇ, ಸರ್ಕಾರಿ ಕೆಲಸಕ್ಕೆ ಹಾಜರಾಗದೆ ದೀರ್ಘಾವಧಿಯ ಅನಧಿಕೃತ ಗೈರು ಹಾಜರಾಗಿರುವುದು ತೀವ್ರತೆರನಾದ ದುರ್ವರ್ತನೆ ಆಗಿರುವುದರಿಂದ ಅವರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವ ಹಿನ್ನೆಲೆಯಲ್ಲಿ ಹಾಗೂ 2000–01, 2001–02, 2002–03, 2003–04ರ ಸಾಲಿನ ಆಪಾದಿತರ ಕಾರ್ಯನಿರ್ವಹಣಾ ವರದಿಗಳಲ್ಲಿ, ನೌಕರರ ಕೆಲಸ ಕಾರ್ಯಗಳು ಸಾಧಾರಣ ಮಟ್ಟಕ್ಕಿಂತ ಕಡಿಮೆ ಇರುವುದಾಗಿ ಮೌಲ್ಯಮಾಪನವಾಗಿದ್ದು, ಎರಡನೇ ದರ್ಜೆ ಭೂಮಾಪಕರ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದೇ, ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಯಾವುದೇ ಶ್ರದ್ದೆ, ಆಸಕ್ತಿಯನ್ನು ತೋರದ ಹಿನ್ನೆಲೆಯಲ್ಲಿ, ಅವರನ್ನು ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ತೀರ್ಮಾನಿಸಿ, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(viii) ರೊಂದಿಗೆ ಓದಿಕೊಂಡ ನಿಯಮ 9(3)ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರಾಜೀವ್ ಚಾವ್ಲಾ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಶ್ರೀ ನಾರಾಯಣ, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್ ಕಛೇರಿ, ಬೇಲೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ
ಪಿ.ಆರ್.13 ಮತ್ತು ಭೂದಾಖಲೆಗಳು, ಬೆಂಗಳೂರು.

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ**
**ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.11/2005–06, ದಿನಾಂಕ:16ನೇ ಡಿಸೆಂಬರ್, 2008**

**ವಿಷಯ:** ಶ್ರೀ ಹೆಚ್.ಪಿ. ತೀರ್ಥಪ್ರಸಾದ್, ಬಾಂದು ಜವಾನರು, ತಹಶೀಲ್ದಾರ್ ಕಛೇರಿ, ಮಡಿಕೇರಿ ಇವರ ವಿರುದ್ಧದ ಶಿಸ್ತು ಕ್ರಮ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆ ಕಾರಣ ಕೇಳಿ ನೋಟೀಸು (ಆರೋಪ ಪಟ್ಟಿಯೊಂದಿಗೆ) ದಿ:18.03.2006 ಮತ್ತು 24.07.2006.

2) ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿದ ಈ ಕಛೇರಿ ನಡವಳಿ ಸಮಸಂಖ್ಯೆ: ದಿನಾಂಕ:20.06.2007.
3) ನೌಕರರ ಮನವಿ ದಿನಾಂಕ:08.08.2007.
4) ಈ ಕಛೇರಿ ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ.ಜಿಡಿ.ವರ್ಗ.62/05–06, ದಿನಾಂಕ:12.01.2006.
5) ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಿರುವ ಈ ಕಛೇರಿ ಪತ್ರ ಸಮಸಂಖ್ಯೆ ದಿನಾಂಕ:16.10.2007.
6) ವಿಚಾರಣಾಧಿಕಾರಿಗಳ ವರದಿ ಸಂಖ್ಯೆ: ಸಿಬ್ಬಂದಿ.ಶಿಸ್ತು.ಅ.ಗೈ.3/07–08, ದಿನಾಂಕ:17.04.2008.
7) ಈ ಕಛೇರಿಯ ಎರಡನೇ ಕಾರಣ ಕೇಳಿ ನೋಟೀಸು ಸಮಸಂಖ್ಯೆ ದಿನಾಂಕ:05.06.2008.

**ಪ್ರಸ್ತಾವನೆ:**

ಶ್ರೀ ಹೆಚ್.ಪಿ. ತೀರ್ಥಪ್ರಸಾದ್, ಬಾಂದು ಜವಾನ, ತಹಶೀಲ್ದಾರ್ ಕಛೇರಿ, ಮಡಿಕೇರಿ ಆದ ಇವರು ಇಲಾಖೆಯು ಕಂದಾಯ ಇಲಾಖೆಯೊಂದಿಗೆ ಕಾರ್ಯ ವಿಲೀನಗೊಂಡ ಸಂದರ್ಭದಲ್ಲಿ ಸದರಿ ಕಛೇರಿಗೆ ಸ್ಥಳ ನಿಯುಕ್ತಿಗೊಂಡು, ದಿನಾಂಕ:09.05.2005 ರಂದು ಕರ್ತವ್ಯಕ್ಕೆ ಹಾಜರಾಗಿ, ದಿನಾಂಕ:10.05.2005 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವ ಬಗ್ಗೆ ಈ ಕಛೇರಿಯಿಂದ ಕಾರಣ ಕೇಳಿ ನೋಟೀಸನ್ನು ಆರೋಪ ಪಟ್ಟಿಯೊಂದಿಗೆ ದಿನಾಂಕ:18.03.2006 ಮತ್ತು 24.07.2006 ರಂದು ಜಾರಿ ಮಾಡಿದ್ದು, ನೌಕರರು ಖಾಯಂ ವಿಳಾಸದಲ್ಲಿ ಲಭ್ಯವಿಲ್ಲದ ಕಾರಣ, ನೌಕರರ ಸಹೋದರಿಯವರಿಗೆ ಜಾರಿ ಮಾಡಿ ಮನೆಯ ಬಾಗಿಲಿಗೆ ಅಂಟಿಸಲಾಗಿರುತ್ತದೆ.

ನೌಕರರ ವಿರುದ್ಧ ಮಾಡಲಾದ ಆರೋಪಗಳನ್ನು ಈ ಕೆಳಕಂಡಂತೆ ಪುನರುಚ್ಚರಿಸಿದೆ. (ಸದರಿ ನೌಕರರನ್ನು ಇನ್ನು ಮುಂದೆ ಆಪಾದಿತ ನೌಕರರೆಂದು ಕರೆಯಲಾಗಿದೆ)

**ಆರೋಪ**

ತಹಸೀಲ್ದಾರ್, ಕಛೇರಿ, ಮಡಿಕೇರಿ ತಾಲ್ಲೂಕು, ಮಡಿಕೇರಿಗೆ ಬಾಂದು ಜವಾನರಾಗಿ ಕಂದಾಯ ಇಲಾಖೆಯೊಂದಿಗೆ ಕಾರ್ಯವಿಲೀನ ಸಂದರ್ಭದಲ್ಲಿ ಸ್ಥಳ ನಿಯುಕ್ತಿ ಹೊಂದಿ ದಿನಾಂಕ:09.05.2005 ರಂದು ಕರ್ತವ್ಯಕ್ಕೆ ಹಾಜರಾದ ಶ್ರೀ ತೀರ್ಥಪ್ರಸಾದ್ ಆದ ನೀವು ದಿನಾಂಕ:10.05.2005 ರಿಂದ ಇಲ್ಲಿಯವರೆಗೆ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೆ, ಸಕ್ಷಮ ಪ್ರಾಧಿಕಾರಿಯವರಿಂದ ರಜೆ ಮಂಜೂರಾತಿಯನ್ನಾಗಲೀ, ಪೂರ್ವಾನುಮತಿಯನ್ನಾಗಲೀ ಪಡೆಯದೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗುವ ಮೂಲಕ ಕಛೇರಿಯ ದೈನಂದಿನ ಕೆಲಸಕ್ಕೆ ತೊಂದರೆ ಉಂಟು ಮಾಡಿರುತ್ತೀರಿ. ಇದರಿಂದ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 1957ರ ನಿಯಮ 106(ಎ) ಮತ್ತು 108ನ್ನು ಉಲ್ಲಂಘಿಸಿದಂತಾಗಿ ದುರ್ನಡತೆ ಎಸಗಿರುತ್ತೀರಿ. ಆ ಕಾರಣ, ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(I) (II) ಮತ್ತು (III)ನ್ನು ಉಲ್ಲಂಘಿಸಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರನ್ವಯ ಶಿಸ್ತುಕ್ರಮ ಜರುಗಿಸಲು ಅನುವು ಮಾಡಿಕೊಟ್ಟಿರುತ್ತೀರಿ. ಆದಕಾರಣ ಈ ಆರೋಪ.

ಆಪಾದಿತ ನೌಕರರು ಸದರಿ ನೋಟೀಸಿಗೆ ಯಾವುದೇ ಹೇಳಿಕೆಯನ್ನು ನೀಡದ ಕಾರಣ ದಿನಾಂಕ:20.06.2007ರ ನಡವಳಿಯಲ್ಲಿ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿದಂತೆ, ವಿಚಾರಣಾಧಿಕಾರಿಗಳು ದಿನಾಂಕ:27.07.2007ರಂದು ವಿಚಾರಣೆ ನಡೆಸಿದ್ದು, ಆಪಾದಿತರು ವಿಚಾರಣೆಗೆ ಹಾಜರಾಗಿ ತಮ್ಮ ವಿರುದ್ಧ ಮಾಡಲಾದ ಆರೋಪವನ್ನು ಒಪ್ಪಿಕೊಂಡು ಲಿಖಿತ ಹೇಳಿಕೆಯನ್ನು ನೀಡಿರುತ್ತಾರೆ. ಹಾಗೂ ಕರ್ತವ್ಯಕ್ಕೆ ಹಾಜರಾಗಲು ಅನುಮತಿಯನ್ನು ಕೋರಿರುತ್ತಾರೆ. ಸಾಕ್ಷಿದಾರರು ಸಹ ಆಪಾದಿತ ನೌಕರರ ಗೈರುಹಾಜರಿ ಬಗ್ಗೆ ಸಾಕ್ಷ್ಯ ನುಡಿದಿರುವ ಮೇರೆಗೆ ವಿಚಾರಣಾಧಿಕಾರಿಗಳು, ಆಪಾದಿತ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿದೆಯೆಂದು ಅಭಿಪ್ರಾಯಪಟ್ಟಿರುತ್ತಾರೆ. ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿ ಈ ಕಛೇರಿಯಿಂದ ನೌಕರರಿಗೆ 2ನೇ ಕಾರಣ ಕೇಳಿ ನೋಟೀಸನ್ನು ವಿಚಾರಣಾ ವರದಿಯೊಂದಿಗೆ ದಿನಾಂಕ:05.06.2008ರಂದು ಜಾರಿ ಮಾಡಲಾಗಿರುತ್ತದೆ. ಆಪಾದಿತರು ಸ್ವವಿಳಾಸದಲ್ಲಿ ಲಭ್ಯವಾಗದ ಕಾರಣ, ಸದರಿ ನೋಟೀಸನ್ನು ಆಪಾದಿತರ ಸಹೋದರಿಯು ಪಡೆದಿದ್ದು, ಒಂದು ಪ್ರತಿಯನ್ನು ಮನೆಯ ಬಾಗಿಲಿಗೆ ಅಂಟಿಸಿ ಅಕ್ಕಪಕ್ಕದವರಿಂದ ಮಹಜರ್ ಪಡೆಯಲಾಗಿರುತ್ತದೆ. ಆಪಾದಿತರು ಸದರಿ ನೋಟೀಸಿಗೆ ಈವರೆಗೂ ಯಾವುದೇ ಬರಹ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಹಾಗೂ ದಿನಾಂಕ:08.08.2007 ರಂದು ಆಪಾದಿತರು ಮನವಿಯನ್ನು ಸಲ್ಲಿಸಿ, ಅನಧಿಕೃತ ಗೈರುಹಾಜರಾದ ಬಗ್ಗೆ ತಮ್ಮ ತಪ್ಪನ್ನು ಮನ್ನಿಸಿ, ಕರ್ತವ್ಯಕ್ಕೆ ಹಾಜರಾಗಲು ಅನುಮತಿಯನ್ನು ನೀಡಲು ಕೋರಿರುವ ಮೇರೆಗೆ ಈ ಕಛೇರಿಯ ಅಧಿಕೃತ ಜ್ಞಾಪನ ದಿನಾಂಕ:12.01.2006ರಲ್ಲಿ ತಹಸೀಲ್ದಾರ್, ಭಟ್ಕಳ ಕಛೇರಿಗೆ ವರ್ಗಾಯಿಸಿರುವ ಹಿನ್ನೆಲೆಯಲ್ಲಿ ಈ ಕಛೇರಿ ಪತ್ರ ದಿನಾಂಕ:16.10.2007ರಲ್ಲಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿಯನ್ನು ನೀಡಿದ್ದರೂ ಸಹ ಆಪಾದಿತರು ವರ್ಗಾವಣೆಗೊಂಡ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗದೆ ಗೈರುಹಾಜರಿಯಲ್ಲಿಯೇ ಮುಂದುವರೆದಿದ್ದು ಎರಡನೇ ಕಾರಣ ಕೇಳಿ ನೋಟೀಸಿಗೆ ಯಾವುದೇ ಹೇಳಿಕೆಯನ್ನು ನೀಡದೆ ಇರುವುದನ್ನು ಪರಿಶೀಲಿಸಿದಾಗ, ಸದರಿಯವರಿಗೆ ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಯಾವುದೇ ಶ್ರದ್ಧೆ ಆಸಕ್ತಿ ಇಲ್ಲದಿರುವುದು ಕಂಡುಬರುತ್ತಿದ್ದು, ಆರೋಪ ಸಾಬೀತಾಗಿರುವ ಬಗ್ಗೆ

ವಿಚಾರಣಾಧಿಕಾರಿಗಳ ವರದಿ, ಸಾಕ್ಷ್ಯ, ದಾಖಲೆಗಳು ಹಾಗೂ ಆಪಾದಿತರು ವಿಚಾರಣೆ ವೇಳೆಯಲ್ಲಿ ನೀಡಿರುವ ಹೇಳಿಕೆಯನ್ನು ಪರಿಶೀಲಿಸಿ, ಆಪಾದಿತರಿಗೆ ಕಠಿಣ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಹೆಚ್.ಪಿ. ತೀರ್ಥಪ್ರಸಾದ್, ಬಾಂದು ಜವಾನ, ದಿನಾಂಕ:10.05.2005 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದು ಆರೋಪಿತ ನೌಕರರು ಈ ಅಂಶವನ್ನು ಒಪ್ಪಿಕೊಂಡಿರುವ ಸಂದರ್ಭದಲ್ಲಿ ಸಾಬೀತಾಗಿರುತ್ತದೆ. ದಿನಾಂಕ:10.05.2005 ರಿಂದ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೆ, ಸರ್ಕಾರಿ ಕೆಲಸಕ್ಕೆ ದೀರ್ಘಕಾಲದ ವರೆಗೆ ಅನಧಿಕೃತ ಗೈರು ಹಾಜರಾಗಿರುವುದು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 108 ಅನ್ನು ಆಕರ್ಷಿಸಿರುವ ಹಿನ್ನೆಲೆಯಲ್ಲಿ ಆಪಾದಿತ ನೌಕರರು ಗಂಭೀರವಾದ ಕರ್ತವ್ಯ ಲೋಪ ಹಾಗೂ ದುರ್ವರ್ತನೆ ಎಸಗಿದಂತಾಗಿರುತ್ತದೆ.

ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 108ರ ಪ್ರಕಾರ, ಸರ್ಕಾರವು ಪ್ರಕರಣದ ವಿಶೇಷ ಸಂದರ್ಭಗಳಿಂದಾಗಿ ಅನ್ಯಥಾ ನಿರ್ಣಯಿಸದ ಹೊರತು 4 ತಿಂಗಳು ಹಾಗೂ ಹೆಚ್ಚಿನ ಅವಧಿಗೆ ರಜೆ ಪಡೆದುಕೊಳ್ಳದೇ ಕರ್ತವ್ಯಕ್ಕೆ ವಿಮುಖರಾಗಿ ಗೈರು ಹಾಜರಾಗುವ ಸರ್ಕಾರಿ ನೌಕರರನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರಲ್ಲಿ ನಮೂದಿಸಲಾದ ಕಾರ್ಯವಿಧಾನವನ್ನನುಸರಿಸಿ ಸೇವೆಯಿಂದ ವಜಾ ಮಾಡಬಹುದಾಗಿರುತ್ತದೆ ಅಥವಾ ಸೇವೆಯಿಂದ ತೆಗೆದು ಹಾಕಬಹುದಾಗಿರುತ್ತದೆ. ಈ ಪ್ರಕರಣದಲ್ಲಿ ಆರೋಪಿತ ನೌಕರರು ಯಾವುದೇ ಪ್ರಬಲವಾದ ಕಾರಣವಿಲ್ಲದೇ, ಸರ್ಕಾರಿ ಕೆಲಸಕ್ಕೆ ಹಾಜರಾಗದೆ ದಿನಾಂಕ:10.05.2005 ರಿಂದ ಅನಧಿಕೃತವಾಗಿ ಗೈರು ಹಾಜರಾಗಿರುವುದು ತೀವ್ರತೆರನಾದ ದುರ್ವರ್ತನೆ ಆಗಿರುವುದರಿಂದ ಅವರ ವಿರುದ್ಧ ಮಾಡಲಾಗಿರುವ ಆರೋಪವು ಸಾಬೀತಾಗಿರುವ ಹಿನ್ನಲೆಯಲ್ಲಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(viii) ರೊಂದಿಗೆ ಓದಿಕೊಂಡ ನಿಯಮ 9(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರಾಜೀವ್ ಚಾವ್ಲಾ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಶ್ರೀ ಹೆಚ್.ಪಿ. ತೀರ್ಥಪ್ರಸಾದ್, ಬಾಂದು ಜವಾನರು, ತಹಶೀಲ್ದಾರ್ ಕಛೇರಿ, ಮಡಿಕೇರಿ (ವರ್ಗಾವಣೆ ಆದೇಶ ತಹಶೀಲ್ದಾರ್, ಭಟ್ಕಳ ಕಛೇರಿ) ಇವರನ್ನು ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ

ಪಿ.ಆರ್.14 ಮತ್ತು ಭೂದಾಖಲೆಗಳು, ಬೆಂಗಳೂರು.

**IN THE COURT OF 3RD ADDITIONAL CHIEF METROPALITAN MAGISTRATE, BANGALORE CITY, DATED:14TH AUGUST, 2008**

It is here by notified for the information of the public that the under mentioned one hero Honda splender motor cycle and one Kawasaki bajaj motor cycle which is in the custody of Raj Rajeshwari Nagar Police Station, Bangalore City. Has unclaimed shall be confiscated to the Government and disposed as per law, if not claimed by the owner with proof of owner ship within 03 months from the date of the publication of this notification.

| Sl. No. | Cimiss No. | P.F. No. & Date | Vehicle No | Nature of Property |
|---|---|---|---|---|
| 1. | 163/06 | P.F. No.23/06 Date:08.09.2006 | KA-04-EB-8823, Eng No.00F18M-09905 Chass No.00F20C-11945 | M/C Hero Honda Splender |
| 2. | 166/06 | P.F.No.24/06, Date:10.09.2006 | KA-05-E-6910, Eng No.E30BH-001178, Chass No.C30BH-001288. | M/C Kawasaki bajaj. |

By The Court Order

PR-447 3rd Additional Chief Metropolitan Magistrate Court, Bangalore.

**POLICE DEPARTMENT**

**PROCEEDINGS OF THE COMMISSIONER OF POLICE BANGALORE CITY**

**Sub:** Controlling of places of public entertainment.

**Preamble:**

Whereas representations have been received that certain places of public entertainment are open beyond midnight in certain parts of the city and giving scope for disorderly conduct, public nuisance and

disturbances of public tranquility. Whereas it is considered necessary to control the places of public entertainment by fixing the hours during which they will remain open to prevent public nuisance, disorderly conduct in public places and disturbances of public peace. Therefore, the following order is hereby passed for preservation of public order.

**Order No. MAG(2)/AM/1/2009-10, Dated:19th May, 2009**

I. Shankar Bidari, Commissioner of Police, Bangalore City, in exercise of powers vested with me under section 31, Sub Section W. of the Karnataka Police Act, 1963, hereby order that all the places of public entertainment as defined in Section 2 Sub Section 15 of the Karnataka Police Act, 1963 shall remain open from 0600 to 2400 hours only (i.e. from 6 A.M. to 12 midnight). all the places of public entertainment shall remain closed from 0000 to 0600 hours everyday (i.e., from midnight to 6 A.M.)

2. If any person owning or having an interest and managing a place of public entertainment is desirous of keeping any particular place of public entertainment open during the period from 0000 to 0600 hours or part thereof, he shall apply in writing to the undersigned duly stating the reasons why he would like to keep open any particular place of public entertainment and the period during which he would like to keep the place of public entertainment open i.e., during the period from 0000 to 0600 hours or part thereof, and obtain written permission from the undersigned. If any place of public entertainment is kept open during the period from 0000 to 0600 hours, he shall be liable for prosecution and penalty u/s 103 of the Karnataka Police Act, 1963.

3. This order will be applicable to all places of public entertainment situated in the limits of all Police Stations under the administrative control of the Commissionerate of Police, Bangalore City, regardless of the Revenue District or Taluk, in which they are situated.

4. This order will not apply to bar and restaurants, clubs and hotels serving Indian Made Foreign Liquor (CL9, CL4 and CL7 etc.,) and who have obtained licence from the Excise Department. These places will continue to operate as per the provisions of the Karnataka Excise Act, Rules and licence conditions and shall close at 11.30 P.M.

5. This order will also be not be applicable to place of public entertainment situated within the premises of Bangalore International Airport, Railway Stations and KSRTC and BMTC Bus stations situated within the limits of the Commissionerate of Police, Bangalore City.

6. this order will come into force from 20th May, 2009 and will remain in force until further orders.

7. This order is issued with the previous sanction of the Government of Karnataka.

Given under my signature and seal this day, the 19th May, 2009.

**SHANKAR BIDARI**

PR-453 Commissioner of Police, Bangalore City.

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,**
**ಹಾಸನ ಜಿಲ್ಲೆ, ಹಾಸನ**
**ಪತ್ರಿಕಾ ಪ್ರಕಟಣೆಗಾಗಿ**

**ಸಂಖ್ಯೆ:ಬಿಸಿಎಂ-4/ಕಾಪತ/ಸಿಆರ್-97/08-09, ದಿನಾಂಕ:19ನೇ ಮೇ, 2009**

ವಿಷಯ: 2009-10ನೇ ಸಾಲಿಗೆ ಹಿಂದುಳಿದ ವರ್ಗಗಳ ವಿವಿಧ ಗುಂಪಿನ ಕಾನೂನು ಪದವೀಧರರಿಗೆ ನಾಲ್ಕು ವರ್ಷಗಳ ತರಬೇತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

ಉಲ್ಲೇಖ:1) ಸರ್ಕಾರಿ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಎಲ್/68/ಎಸ್‌ಇಡಬ್ಲ್ಯೂ/89, ಬೆಂಗಳೂರು, ದಿನಾಂಕ:2.11.1990.
2) ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಹಾಸನರವರ ದಿನಾಂಕ:12.05.2009ರಂದು ನಡೆದ ಪ್ರಗತಿ ಪರಿಶೀಲನಾ ಸಭೆ ನಡವಳಿಗಳು.

ಉಲ್ಲೇಖ (1)ರ ಸರ್ಕಾರದ ಆದೇಶಾನುಸಾರ ಹಾಸನ ಜಿಲ್ಲೆಗೆ ಸೇರಿದ ಹಿಂದುಳಿದ ವರ್ಗಗಳ ಪ್ರವರ್ಗ-1, 2ಎ, 3ಎ ಮತ್ತು 3ಬಿ ವರ್ಗಕ್ಕೆ ಸೇರಿದ 10 ಕಾನೂನು ಪದವೀಧರರಿಗೆ ವಕೀಲ ವೃತ್ತಿಯಲ್ಲಿ ಮತ್ತು ನ್ಯಾಯಾಂಗ ಸೇವೆಯ ಪೂರ್ವ

ತರಬೇತಿ ಪಡೆಯಲು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಂತೆ ಇಚ್ಛೆಯುಳ್ಳ ಅರ್ಹ ಅಭ್ಯರ್ಥಿಗಳಿಂದ 2009–10ನೇ ಸಾಲಿಗೆ ಅರ್ಜಿ ಆಹ್ವಾನಿಸಲಾಗಿದೆ.

**ನಿಬಂಧನೆಗಳು:**

1) ಅಭ್ಯರ್ಥಿಗಳು ಸರ್ಕಾರದ ಆದೇಶದಲ್ಲಿನಂತೆ ಹಿಂದುಳಿದ ವರ್ಗಗಳ ಪ್ರವರ್ಗ–1, 2ಎ, 3ಎ, 3ಬಿ ವರ್ಗಕ್ಕೆ ಸೇರಿದವರಾಗಿರಬೇಕು. ಈ ಬಗ್ಗೆ ನಿಗದಿತ ನಮೂನೆಯಲ್ಲಿ ಸಂಬಂಧಪಟ್ಟ ತಹಸೀಲ್ದಾರ್‌ರವರಿಂದ ಜಾತಿ ಆದಾಯ ಪರಿಶೀಲನಾ ಪತ್ರವನ್ನು ಭರ್ತಿ ಮಾಡಿದ ಅರ್ಜಿಗಳೊಂದಿಗೆ ಕಳುಹಿಸಿಕೊಡಬೇಕು. ಪ್ರವರ್ಗ–1ರ ಅಭ್ಯರ್ಥಿಗಳಿಗೆ ಆದಾಯಮಿತಿ ಇರುವುದಿಲ್ಲ. ಉಳಿದ ಪ್ರವರ್ಗಗಳವರಿಗೆ ಆದಾಯ ರೂ.15,000/–ಗಳ ಒಳಗೆ ಇರಬೇಕು.

2) ತರಬೇತಿಗೆ ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ–10 ಮಾತ್ರ ಆಯ್ಕೆ ಮಾಡಬೇಕಾದ ಅಭ್ಯರ್ಥಿಗಳ ವರ್ಗವಾರು ವಿವರ ಪ್ರವರ್ಗ–1 ಶೇ.15, 2ಎ–ಶೇ.58, 3ಎ ಶೇ.15 ಮತ್ತು ಪ್ರವರ್ಗ–3ಬಿ ಶೇ.17ರ ಅನುಪಾತದಲ್ಲಿ ಆಯ್ಕೆ ಮಾಡಲಾಗುವುದು.

3) ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 30 ವರ್ಷಗಳ ವಯೋಮಿತಿಯಲ್ಲಿರಬೇಕು. ಪ್ರವರ್ಗ–1ರ ಅಭ್ಯರ್ಥಿಗಳಿಗೆ ಗರಿಷ್ಠ 31 ವರ್ಷ ಮೀರಿರಬಾರದು.

4) ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷದೊಳಗೆ ತೇರ್ಗಡೆಯಾದ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರಿರುತ್ತಾರೆ. ಅವಶ್ಯ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ, ಅಂಕಪಟ್ಟಿಗಳ ದೃಢೀಕರಣ ಪತ್ರ, ಜನ್ಮ ದಿನಾಂಕ ದೃಢೀಕರಿಸಲು ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕರಣ ಪ್ರತಿಯನ್ನು ಅರ್ಜಿಗಳೊಂದಿಗೆ ಲಗತ್ತಿಸಬೇಕು.

5) ಆಯ್ಕೆಯಾದ ಅಭ್ಯರ್ಥಿಗಳಿಗೆ ನಾಲ್ಕು ವರ್ಷ ತರಬೇತಿ ನೀಡಲಾಗುವುದು. ಮತ್ತು ಮಾಹೆಯಾನ ರೂ.1000/– (ಒಂದು ಸಾವಿರ ರೂಪಾಯಿ ಮಾತ್ರ) ತರಬೇತಿ ಭತ್ಯೆ ನೀಡಲಾಗುವುದು. ತರಬೇತಿಯ ಮಧ್ಯಂತರದಲ್ಲಿ ಬಿಟ್ಟುಹೋಗಬಾರದು. ಆದರೆ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದಲ್ಲಿ ಉದ್ಯೋಗ ದೊರೆತು, ಮಧ್ಯಂತರ ಅವಧಿಯಲ್ಲಿ ಬಿಟ್ಟುಹೋಗುವವರಿಗೆ ಈ ನಿಬಂಧನೆಗಳು ಅನ್ವಯಿಸುವುದಿಲ್ಲ.

6) ನಿಗದಿಪಡಿಸಿದ ದಿನಾಂಕದ ನಂತರ ಬಂದ ಅರ್ಜಿಗಳು ಅಪೂರ್ಣ ಹಾಗೂ ಅನರ್ಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

7) ಪರಿಪೂರ್ಣ ಮಾಹಿತಿಯೊಂದಿಗೆ ಸ್ವೀಕೃತವಾದ ಅರ್ಜಿಯ ಪರಿಶೀಲನೆ ನಂತರ ಆಯ್ಕೆ ಸಮಿತಿಯು ನಿರ್ದಿಷ್ಟಪಡಿಸಿದ ಸ್ಥಳ ಮತ್ತು ವೇಳೆಗೆ ಸಂದರ್ಶನಕ್ಕೆ ಕರೆಯಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ ಕನಿಷ್ಠ 20 ವರ್ಷಗಳ ವಕೀಲ ವೃತ್ತಿ ಅನುಭವವುಳ್ಳ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುವುದು.

9) ಜಿಲ್ಲಾಮಟ್ಟದ ಆಯ್ಕೆ ಸಮಿತಿಯ ಮುಖಾಂತರ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

10) ಆಯ್ಕೆಯಾದ ಅಭ್ಯರ್ಥಿಗಳಿಗೆ 15 ದಿನಗಳು ಕಾಲಾವಕಾಶ ನೀಡಿ, ಒಪ್ಪಿಗೆ ಸೂಚಿಸಲು ತಿಳಿಸಲಾಗುವುದು. ತರಬೇತಿ ಮಧ್ಯದಲ್ಲಿ ಬಿಟ್ಟು ಹೋಗದಿರುವ ಬಗ್ಗೆ ಕರಾರು ಪತ್ರ ಬರೆದು ಕೊಡತಕ್ಕದ್ದು.

11) ಆಯ್ಕೆಯಾದ ಅಭ್ಯರ್ಥಿಗಳು ನಿಗದಿಪಡಿಸಿದ ದಿನಾಂಕದೊಳಗೆ ಲಿಖಿತ ಒಪ್ಪಿಗೆ ಸೂಚಿಸದಿದ್ದಲ್ಲಿ, ಅಥವಾ ತರಬೇತಿಗೆ ಹಾಜರಾಗಲು ತಿರಸ್ಕರಿಸಿದಲ್ಲಿ, ಸದರಿ ಅಭ್ಯರ್ಥಿಯ ಆಯ್ಕೆಯನ್ನು ರದ್ದುಪಡಿಸಿ, ಕಾಯ್ದಿಟ್ಟ ಪಟ್ಟಿಯಿಂದ ಮತ್ತೊಬ್ಬ ಅರ್ಹ ಅಭ್ಯರ್ಥಿಯನ್ನು ಆಯ್ಕೆ ಮಾಡಲಾಗುವುದು.

12) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದಲ್ಲಿ ಅಥವಾ ತರಬೇತಿಯಿಂದ ಮಧ್ಯದಲ್ಲಿ ಬಿಟ್ಟುಹೋದಲ್ಲಿ, ಸರ್ಕಾರವು ಸದರಿ ಅಭ್ಯರ್ಥಿಯ ಮೇಲೆ ಖರ್ಚು ಮಾಡಲಾದ ಹಣವನ್ನು ವರ್ಷಕ್ಕೆ ಶೇ.10ರ ಬಡ್ಡಿಯೊಂದಿಗೆ ಭೂಕಂದಾಯ ಬಾಕಿ ಎಂದು ಪರಿಗಣಿಸಿ, ವಸೂಲಿ ಮಾಡಲಾಗುವುದು. ಹಾಗೂ ಶಿಕ್ಷೆಗೆ ಗುರಿಪಡಿಸಲಾಗುವುದು.

13) ಅಭ್ಯರ್ಥಿಯು ಬಾರ್‌ಕೌನ್ಸಿಲ್‌ನಲ್ಲಿ ತಮ್ಮ ಹೆಸರನ್ನು ನೊಂದಾಯಿಸಿರಬೇಕು ಮತ್ತು ಈ ಬಗ್ಗೆ ದಾಖಲೆ ಒದಗಿಸಬೇಕು.

14) ಭರ್ತಿ ಮಾಡಿದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಜಿಲ್ಲಾ ಮಟ್ಟದ ಆಯ್ಕೆ ಸಮಿತಿ ಮತ್ತು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಹೆಚ್.ಕೆ.ಬಿ. ವಾಣಿಜ್ಯ ಸಂಕೀರ್ಣ, 2ನೇ ಮಹಡಿ, 23ನೇ ಅಡ್ಡರಸ್ತೆ, ಕುವೆಂಪುನಗರ, ಹಾಸನ ಇವರಿಗೆ ದಿನಾಂಕ:30.06.2009 ರಂದು ಅಪರಾಹ್ನ 5.30 ಗಂಟೆ ಒಳಗೆ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

15) ಅರ್ಜಿ ನಮೂನೆಗಳನ್ನು ಈ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಉಚಿತವಾಗಿ ಪಡೆಯಬಹುದಾಗಿದೆ.

ಜಿಲ್ಲಾ ಅಧಿಕಾರಿ ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಹಾಸನ.

ಪಿ.ಆರ್.446

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು 1ನೇ ವೃತ್ತ, ಮಾರ್ಗೋಸ ರಸ್ತೆ, ಮಲ್ಲೇಶ್ವರಂ, ಬೆಂಗಳೂರು ಇವರ ನಡವಳಿಕೆಗಳು

**ವಿಷಯ:** ದಿ ಮಲ್ಲೇಶ್ವರಂ ಕೋ–ಆಪರೇಟಿವ್ ಬ್ಯಾಂಕ್ ಲಿ., ಮಲ್ಲೇಶ್ವರಂ, ಬೆಂಗಳೂರು ಇವರ ಅಮಲ್ಜಾರಿ ಅರ್ಜಿ ಸಂಖ್ಯೆ:ಜೆಆರ್‌ಡಿ/ಯುಬಿಎಫ್/1462/05–06 (ಸಿಇಪಿ ಸಂಖ್ಯೆ: ಎಆರ್ 44/40/08–09) ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು 1960ನೇ ಸಹಕಾರ ಸಂಘಗಳ ನಿಯಮಗಳ ನಿಯಮ 38(5) (ಎ) ರನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:** 1) ದಾವಾ ಸಂಖ್ಯೆ: ಜೆಆರ್‌ಡಿ/ಯುಬಿಎಫ್/1462/05–06.
2) ಅಮಲ್ಜಾರಿ ಅರ್ಜಿ ಸಂಖ್ಯೆ: 40/08–09.
3) ಮಾರಾಟಾಧಿಕಾರಿಯವರ ವರದಿ ದಿನಾಂಕ:10.02.2009.

**ಪ್ರಸ್ತಾವನೆ:**

ಶ್ರೀ ಎಂ.ವಿ.ವಿ. ಗುಪ್ತ ಬಿನ್ ಲೇಟ್ ಎಂ.ಎನ್. ವೆಂಕಟರಾಮಯ್ಯ, ನಂ.1660, 17ನೇ 'ಎ' ಮುಖ್ಯರಸ್ತೆ, 1ನೇ ಹಂತ, 5ನೇ ಬ್ಲಾಕ್, ಹೆಚ್.ಬಿ.ಆರ್. ಲೇಔಟ್, ಬೆಂಗಳೂರು–560 043 ಇವರು ದಿ ಮಲ್ಲೇಶ್ವರಂ ಕೋ–ಆಪರೇಟಿವ್ ಬ್ಯಾಂಕ್ ಲಿ., ಮಲ್ಲೇಶ್ವರಂ, ಬೆಂಗಳೂರು ಈ ಬ್ಯಾಂಕಿನಿಂದ ದಿನಾಂಕ:01.02.2003ರಂದು ರೂ.25,00,000/– (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಗಳನ್ನು ಸ್ಥಿರಾಸ್ತಿ ಅಡಮಾನ ಮಾಡಿ ಸಾಲವಾಗಿ ಪಡೆದು ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರನ್ವಯ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, (ನಿ–441) ದಾವಾ ಪಂಚಾಯ್ತಿ ನ್ಯಾಯಾಲಯ, ಕ.ರಾ.ಸ.ಪ. ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ: ಜೆಆರ್‌ಡಿ/ ಯುಬಿಎಫ್/1462/05–06 ರಂತೆ ದಾವಾ ಹೂಡಿ ಆದೇಶ ಪಡೆದಿದ್ದರೂ ಸಾಲದ ಬಾಕಿ ವಸೂಲಾತಿಯಾಗಿರುವುದಿಲ್ಲ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, (ನಿ–441) ದಾವಾ ಪಂಚಾಯ್ತಿ ನ್ಯಾಯಾಲಯ, ಕ.ರಾ.ಸ.ಪ. ಬ್ಯಾಂ.ಮ ನಿಯಮಿತ, ಬೆಂಗಳೂರು ಇವರ ನ್ಯಾಯಾಲಯದಿಂದ ಪಡೆದ ಡಿಕ್ರಿ ಆದೇಶದನ್ವಯ ದಿ ಮಲ್ಲೇಶ್ವರಂ ಸಹಕಾರ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 34(1) ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, 1ನೇ ವಲಯ, ಮಲ್ಲೇಶ್ವರಂ, ಬೆಂಗಳೂರು–03 ಇವರ ಕಛೇರಿಯಲ್ಲಿ ಸಿಇಪಿ ಸಂಖ್ಯೆ: 40/08–09 ರಂತೆ ಅಮಲ್ಜಾರಿ ಅರ್ಜಿ ದಾಖಲು ಮಾಡಲಾಗಿತ್ತು. ಸದರಿ ಅಮಲ್ಜಾರಿ ಅರ್ಜಿಯನ್ನು ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ಅಂತಿಮವಾಗಿ ಅಮಲ್ಜಾರಿ ಕ್ರಮಕೈಗೊಂಡು ಸಾಲಕ್ಕೆ ಬ್ಯಾಂಕಿನ ಆಧಾರ ಮಾಡಿದ್ದ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ದಿನಾಂಕ:10.02.2009 ರಂದು ಸಾರ್ವಜನಿಕ ಹರಾಜಿಗೆ ತರಲಾಗಿತ್ತು. ಸದರಿ ದಿನ ನಡೆಸಿದ ಹರಾಜಿನಲ್ಲಿ 6 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಶ್ರೀ ಹರೀಶ್ ಷರಾಫ್ ಬಿನ್ ಲೇಟ್ ಮೂಲ್‌ಚಂದ್ ಚುಗ್ ಷರಾಫ್, ನಂ.282, ಹಳೇ ನಂ.65, ನಾರಾಯಣ ಪಿಳ್ಳೈ ಬೀದಿ, ಸಿವಿಲ್ ಸ್ಟೇಷನ್, ಬೆಂಗಳೂರು–01 ಇವರು ರೂ.56,00,000/– (ರೂಪಾಯಿ ಐವತ್ತಾರು ಲಕ್ಷಗಳು ಮಾತ್ರ)ಗಳಿಗೆ ಬಿಡ್ಡು ಮಾಡಿದ್ದು, ಅತೀ ಹೆಚ್ಚು ಬಿಡ್ಡುದಾರರಾಗಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿಯನ್ವಯ ಅಸಲು ರೂ.24,78,293/–ಗಳು ಬಡ್ಡಿ ಮತ್ತು ಇತರೆ ವೆಚ್ಚಗಳು ರೂ.20,92,953/– ಒಟ್ಟು ರೂ.45,71,246/–ಗಳು ಬ್ಯಾಂಕಿಗೆ ಬರಬೇಕಾಗಿರುತ್ತದೆ. ರೂ.56,00,000/–ಗಳ ಅತೀ ಹೆಚ್ಚಿನ ಬಿಡ್ಡುದಾರರಾದ ಶ್ರೀ ಹರೀಶ್ ಷರಾಫ್‌ರವರು ಬಿಡ್ಡಿನ ಮೊತ್ತದ ಶೇಕಡಾ 15ರಷ್ಟು ರೂ.8,40,000/– ಗಳನ್ನು ಹರಾಜಿನ ಸ್ಥಳದಲ್ಲಿಯೇ ಬ್ಯಾಂಕಿಗೆ ಪಾವತಿ ಮಾಡಿರುತ್ತಾರೆ. ಉಳಿಕೆ ಮೊತ್ತದಲ್ಲಿ ರೂ.47,60,000/–ಗಳನ್ನು ದಿನಾಂಕ:28.03.2009 ರಂದು ಪಾವತಿ ಮಾಡಿರುತ್ತಾರೆ.

ದಿ ಮಲ್ಲೇಶ್ವರಂ ಸಹಕಾರ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ:10.02.2009 ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿರುವುದಾಗಿ ಹಾಗೂ ಬ್ಯಾಂಕಿನ ಬಾಕಿದಾರರಾದ ಶ್ರೀ ಎಂ.ವಿ.ವಿ. ಗುಪ್ತ ಬಿನ್ ಲೇಟ್ ಎಂ.ಎನ್. ವೆಂಕಟರಾಮಯ್ಯ ರವರ ಸ್ಥಿರಾಸ್ತಿಯನ್ನು ಶ್ರೀ ಹರೀಶ್ ಷರಾಫ್ ಬಿನ್ ಲೇಟ್ ಮೂಲ್‌ಚಂದ್ ಚುಗ್ ಷರಾಫ್ ರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (3)ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ:10.02.2009ರಂದು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 6 ಜನ ಬಿಡ್ಡುದಾರರು ಭಾಗವಹಿಸಿದ್ದು ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಹರೀಶ್ ಷರಾಫ್ ಬಿನ್ ಲೇಟ್ ಮೂಲ್‌ಚಂದ್ ಚುಗ್ ಷರಾಫ್ ಇವರಿಗೆ ರೂ.56,00,000/– ಗಳಿಗೆ ಮಾರಾಟ ಮಾಡಿರುವುದು

ದಾಖಲೆಗಳಿಂದ ತಿಳಿದುಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನಗಳೊಳಗೆ ಬಾಕಿದಾರರು ವಾದಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ಮರುಪಾವತಿ ಮಾಡದಿರುವುದರಿಂದ ಮತ್ತು ಈ ಬಗ್ಗೆ ಯಾವುದೇ ಆಕ್ಷೇಪಣೆ ಸಲ್ಲಿಸದೇ ಇರುವುದರಿಂದ ದಿನಾಂಕ:10.02.2009ರಂದು ನಡೆಸಲಾದ ಸ್ಥಿರಾಸ್ತಿ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನುಬದ್ಧವಾಗಿದೆ ಎಂದು ಕಂಡುಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಎಆರ್‌ಬಿ44/ಮಾ.ಸ್ಥಿರೀಕರಣ/01, 2009–10, ದಿನಾಂಕ:29ನೇ ಏಪ್ರಿಲ್, 2009**

ಶ್ರೀ ಅಶ್ವಥನಾರಾಯಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು 1ನೇ ವೃತ್ತ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(6)(ಎ)ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ: 40/08–09 ಶ್ರೀ ಎಂ.ವಿ.ವಿ. ಗುಪ್ತ ಬಿನ್ ಲೇಟ್ ಎಂ.ಎಸ್. ವೆಂಕಟರಾಮಯ್ಯ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ:10.02.2009 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಹರೀಶ್ ಷರಾಫ್ ಬಿನ್ ಲೇಟ್ ಮೂಲ್‌ಚಂದ್ ಚುಗ್ ಷರಾಫ್ ಮತ್ತು ಶ್ರೀ ರೂಪೇಶ್ ಷರಾಫ್ ಬಿನ್ ಲೇಟ್ ಮೂಲಚಂದ್ ಚುಗ್ ಷರಾಫ್, ನಂ.282, ಹಳೇ ನಂ.65, ನಾರಾಯಣ ಪಿಳ್ಳೈ ಬೀದಿ, ಸಿವಿಲ್ ಸ್ಟೇಷನ್, ಬೆಂಗಳೂರು ಇವರು ಅತೀ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ರೂ.56,00,000/–ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ.

**ಸ್ಥಿರಾಸ್ತಿಯ ವಿವರ**

ಬೆಂಗಳೂರು ಮಹಾನಗರ ಪಾಲಿಕೆ, ಶಿವಾಜಿನಗರ ವಲಯ, 79ನೇ ವಾರ್ಡ್‌ಗೆ ಸೇರಿದ ಬೆಂಗಳೂರು ಸಿಟಿ, ಮನೆ ನಂ.282, ಹಳೇ ನಂ.65, ನಾರಾಯಣ ಪಿಳ್ಳೈ ಬೀದಿ, ಸಿವಿಲ್ ಸ್ಟೇಷನ್, ಬೆಂಗಳೂರು–01 ರಲ್ಲಿರುವ ಪೂರ್ವಕ್ಕೆ:19.9 ಅಡಿಗಳು, ಪಶ್ಚಿಮಕ್ಕೆ:21 ಅಡಿಗಳು, ಉತ್ತರಕ್ಕೆ: 42.9 ಅಡಿಗಳು ದಕ್ಷಿಣಕ್ಕೆ: 43 ಅಡಿಗಳು ಇದರ ಚಕ್ಕುಬಂದಿ:

ಪೂರ್ವಕ್ಕೆ: ಶ್ರೀ ಮೇಡ ರಾಮಚಂದ್ರಶೆಟ್ಟಿರವರ ಸ್ವತ್ತು
ಪಶ್ಚಿಮಕ್ಕೆ: ನಾರಾಯಣ ಪಿಳ್ಳೈ ಬೀದಿ
ಉತ್ತರಕ್ಕೆ: ಕಾರ್ಪೋರೇಷನ್ ಲೇನ್
ದಕ್ಷಿಣಕ್ಕೆ: ಶ್ರೀ ಎಂ.ಎಸ್. ಕೃಷ್ಣಮೂರ್ತಿಯವರ ಸ್ವತ್ತು
ಮಾರಾಟದ ಮೊಬಲಗು: ರೂ.56,00,000/–
ಮಾರಾಟ ಮಾಡಿದ ದಿನಾಂಕ:10.02.2009

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:29.04.2009 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಬೆಂಗಳೂರು 1ನೇ ವೃತ್ತ, ಮಾರ್ಗೋಸಾ ರಸ್ತೆ,
ಮಲ್ಲೇಶ್ವರಂ, ಬೆಂಗಳೂರು–560003.

ಪಿ.ಡಿ.29

**KARNATAKA ELECTRICITY REGULATORY COMMISSION 6TH & 7TH FLOORS, MAHALAKSHMI CHAMBERS, NO.9/2, M.G. ROAD, BANGALORE-560001**

**Notification No.D/07/9, Dated:13th May, 2009**

**Amendment to Karnataka Electricity Regulatory Commission (State Advisory Committee) Regulations, 2004**

**WHEREAS** the draft of the amendment to Karnataka Electricity Regulatory Commission (State Advisory Committee) (Amendment) Regulations, 2004, was published on 5th March 2009 calling for comments/ suggestions from interested persons on or before 31st March 2009, as required by sub-section (3) of section 181 of the Electricity Act, 2003 (central Act 36 of 2003). The draft amendment was also made available on the commission's website www.kerc.org.

WHEREAS no comments or suggestions were received by the commission before the stipulated date i.e. 31st March 2009.

THEREFORE In exercise of the powers conferred by section 181 of the Electricity Act, 2003, the Commission hereby make the following amendment to clause (2) of the Regulation 14 of the Karnataka Electricity Regulatory Commission (State Advisory Committee) Regulation 2004, namely:

**1. Short title and commencement.-** (1) These regulations may be called the Karnataka Electricity Regulatory Commission (State Advisory Committee) (Amendment) Regulations, 2009.

(2) They shall come into force from the date of publication in the official Gazette.

**Amendment of regulation 14.-** In Clause (2) of regulations 14 of the Karnataka Electricity Regulatory Commission (State Advisory Committee) Regulations, 2004 for the word and figures "Rs.500/--," the word and figures "Rs.1,000/-"-shall be substituted.

By Order of the Commission,

PD-28 Secretary.

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ನಿಯಮ 441, ದಾವಾ ಪಂಚಾಯ್ತಿ ನ್ಯಾಯಾಲಯ, ಅಮಾನತ್ ಹೌಸ್, ಶಿವಾಜಿನಗರ, ಬೆಂಗಳೂರು**

**ದಾವಾ ನಂ.ಜೆ.ಆರ್.ಡಿ./ ಯು.ಬಿ.ಎಫ್./3560/06-07**

| ವಾದಿ | ಪ್ರತಿವಾದಿ |
|---|---|
| ಪ್ರಧಾನ ವ್ಯವಸ್ಥಾಪಕರು ಅಮಾನತ್ ಕೋ-ಆಪ್ ಬ್ಯಾಂಕ್ ನಿ., ನಂ.43, ಆಸ್ಪತ್ರೆ ರಸ್ತೆ, ಶಿವಾಜಿನಗರ, ಬೆಂಗಳೂರು-560001. | 1. ಸಿಟಿ. ಟವರ್ಸ್, ರಿಯಲ್ ಎಸ್ಟೇಟ್ ಆ್ಯಂಡ್ ಪ್ರಾಪರ್ಟಿ ಡೆವಲಪರ್ಸ್, 1ನೇ ಮಹಡಿ, ಎಮರಾಲ್ಡ್ ಹೌಸ್, ಪ್ಲೇನ್ ಸ್ಟ್ರೀಟ್ ಆಫ್ ಇನ್‌ಫೆಂಟ್ರಿ ರಸ್ತೆ, ಬೆಂಗಳೂರು-01<br>**ಪ್ರತಿನಿಧಿಸುವವರು**<br>1) ಅಸ್ರಫ್ ಆಲಿ<br>2) ಸಾಜೀದ್ ವಾಹಿದ್<br>2. ಫೈಸಲ್ ಮೊಹಮದ್, ನಂ.40, 5ನೇ ಮೈನ್, ಜಯಮಹಲ್ ಎಕ್ಸ್‌ಟೆನ್ಷನ್, ಬೆಂಗಳೂರು-46. |

**ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಅಡಿಯಲ್ಲಿ ಸ್ಥಿರಾಸ್ತಿಗಳ ಜಪ್ತಿ ಪೂರ್ವ ಆದೇಶ**

ಮೇಲ್ಕಂಡ ದಾವೆಯನ್ನು ವಾದಿ ಬ್ಯಾಂಕ್ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರ ಅಡಿಯಲ್ಲಿ ಪ್ರತಿವಾದಿಯಿಂದ ಬರಬೇಕಾಗಿರುವ ರೂ.3,85,00,000/-ಗಳನ್ನು ವಾರ್ಷಿಕ ಶೇಕಡಾ 14% ಬಡ್ಡಿ ಹಾಗೂ ಶೇಕಡಾ 2% ರಂತೆ ಸುಸ್ತಿ: ದಂಡದ ಬಡ್ಡಿಯೊಂದಿಗೆ ದಿನಾಂಕ:17.12.2004 ರಿಂದ ಪೂರ್ತ ವಸೂಲಿ ಮಾಡುವ ಸಲುವಾಗಿ ಹೂಡಿರುವ ವ್ಯಾಜ್ಯವಾಗಿರುತ್ತದೆ.

ವಾದಿ ಬ್ಯಾಂಕು ಕಲಂ 103ರ ಅಡಿ ಅರ್ಜಿಯನ್ನು ಸಲ್ಲಿಸಿ ಈ ದಾವೆಯಲ್ಲಿ ಪ್ರತಿವಾದಿಗಳ ವಿರುದ್ಧ ಹೊರಡಿಸಬಹುದಾದ ಯಾವುದೇ ನಿರ್ಣಯವನ್ನು/ ಆದೇಶವನ್ನು ಅಥವಾ ಅವಾರ್ಡನ್ನು ಸದರಿಯವರು ವಿಳಂಬಗೊಳಿಸುವ ಅಥವಾ ಅದರ ಜಾರಿಗೆ ಅಡ್ಡಿಯನ್ನುಂಟು ಮಾಡುವ ಉದ್ದೇಶದಿಂದ ಷೆಡ್ಯೂಲ್‌ನಲ್ಲಿ ನಮೂದಿಸಿರುವಂತೆ ಪ್ರತಿವಾದಿಗಳಿಗೆ ಸೇರಿದ ಸ್ಥಿರಾಸ್ತಿಯನ್ನು ವರ್ಗಾವಣೆ/ಪರಭಾರೆ ವಿಲೇವಾರಿ ಮಾಡಬಹುದೆಂದು ಮನವರಿಕೆ ಮಾಡಿದ್ದು ಸದರಿ ಅರ್ಜಿಯನ್ನು ಪ್ರತಿವಾದಿಗಳಿಗೆ ಜಾರಿಗೊಳಿಸಿದೆ.

ವಾದಿ ಬ್ಯಾಂಕು ಮುಂದುವರಿದು ಪ್ರತಿವಾದಿಗಳ ಮೇಲ್ಕಂಡ ಕ್ರಮವನ್ನು ತಡೆಗಟ್ಟದಿದ್ದಲ್ಲಿ ಅವರ ವಿರುದ್ಧ ವಾದಿ ಬ್ಯಾಂಕು ಅವಾರ್ಡ್; ಡಿಕ್ರಿ ಪಡೆದರೂ ಅದನ್ನು ಜಾರಿಗೊಳಿಸಿ ಹಣ ವಸೂಲಿ ಮಾಡಲು ಯಾವುದೇ ದ್ರವ್ಯಾನುಕೂಲತೆ ಇಲ್ಲದಂತಾಗುತ್ತದೆ ಎಂದು ತಿಳಿಸಿರುತ್ತಾರೆ. ವಾದಿ ಬ್ಯಾಂಕು ಮತ್ತೊಂದು ಅಫಿಡವಿಟ್‌ನ್ನು ಸಲ್ಲಿಸಿ ಷೆಡ್ಯೂಲ್ ಆಸ್ತಿಗೆ ಸಂಬಂಧಿಸಿದಂತೆ ಯಾವುದೇ ವಿವಾದವು ಇರುವುದಿಲ್ಲವೆಂದು ತಿಳಿಸಿರುತ್ತಾರೆ, ಹಾಗೂ ಪ್ರತಿವಾದಿಗಳು ಪಡೆದಿರುವ ರೂ.3,85,00,000/- ಗಳ ಸಾಲಕ್ಕೆ ಸಂಬಂಧಿಸಿದಂತೆ ಪ್ರತಿವಾದಿಗೆ ಸೇರಿದ ನಿವೇಶನ ಸಂಖ್ಯೆ: 79(1) ಕೆ.ಜಿ. ಬ್ಯಾಡರಹಳ್ಳಿ, ಸರ್ವೆ ನಂ.79(1) ನಂದಿ ದುರ್ಗದ ರೋಡ್, ರಾಮಯ್ಯ ರೆಡ್ಡಿ ರೋಡ್, 2ನೇ ಕ್ರಾಸ್, ಬೆನ್‌ಸನ್ ಟೌನ್, ಬೆಂಗಳೂರು, ಹಾಗೂ ಕಮರ್ಷಿಯಲ್ ಸ್ಟ್ರೀಟ್‌ನಲ್ಲಿರುವ ಸಂಖ್ಯೆ.176 (ಬೇಸ್ಮೆಂಟ್) ಬೆಂಗಳೂರು, ಮತ್ತು ಬ್ರಿಗೇಡ್ ರಸ್ತೆಯಲ್ಲಿರುವ ಕಾಂಪೋಸಿಟ್ ಬಿಲ್ಡಿಂಗ್ ಇದರ ಮುನಿಸಿಪಲ್ ನಂ.45 ಆ್ಯಂಡ್ 46, ಈಸ್ಟ್ರನ್ ಪೋರ್ಷನ್ ಆಫ್ ದಿ ಗ್ರೌಂಡ್ ಫ್ಲೋರ್ ಆ್ಯಂಡ್ ಮೆಜಾನೈನ್ ಫ್ಲೋರ್ ಇದರಿಂದ ಬರುವ ಬಾಡಿಗೆಯನ್ನು

ಆದೇಶ ಪೂರ್ವ ಜಪ್ತಿ ಆದೇಶಕ್ಕೆ ಒಳಪಡಿಸಬೇಕೆಂದು ಕೋರಿರುತ್ತಾರೆ, ಮತ್ತು ವಾದಿ ಪರ ವಕೀಲರು ತಮ್ಮ ವಾದವನ್ನು ಮಂಡಿಸಿರುತ್ತಾರೆ.

ಪ್ರತಿವಾದಿ ಪರ ವಕೀಲರು ತಮ್ಮ ವಾದ ಮಂಡಿಸಿ, ವಾದಿಗಳು Primafacie ಕೇಸೆಂದು ಸಾಬೀತುಪಡಿಸಿರುವುದಿಲ್ಲ ದಾವಾ ಅರ್ಜಿಯಲ್ಲಿ ಸಾಲ ಮಂಜೂರಾತಿಗೆ ಸಂಬಂಧಿಸಿದಂತೆ ದಿನಾಂಕವನ್ನು 17.12.2004 ಎಂದೂ, ಸಾಲ ಮಂಜೂರಾತಿ ಆದೇಶದಲ್ಲಿ 24.12.2004 ಎಂದೂ ಮತ್ತು ಅಕೌಂಟ್ ಸ್ಟೇಟ್‌ಮೆಂಟ್‌ನಲ್ಲಿ 24.11.2004 ಎಂದು ವಿವಿಧ ದಿನಾಂಕಗಳನ್ನು ನಮೂದಿಸಿರುವುದು ಮತ್ತು ಸಾಲ ಮಂಜೂರಾತಿ ಪೂರ್ವದಲ್ಲೇ/ ಮೊದಲೇ ದಾಖಲೆಗಳನ್ನು ಪಡೆದಿರುವುದು, ಪಕ್ಷ ಸಮರ್ಥನೆ (Pleading) ಇಲ್ಲದೆ ಇರುವುದರಿಂದ ಈ ಪ್ರಕರಣ ಪ್ರೈಮಾಫಸಿ ಪ್ರಕರಣವಾಗಿರುವುದಿಲ್ಲ, ಕೇವಲ ಅಕೌಂಟ್ ಸ್ಟೇಟ್‌ಮೆಂಟ್ ಆಧಾರದ ಮೇಲೆ ಪ್ರತಿವಾದಿಗಳು ಸಾಲ ಪಡೆದಿರುತ್ತಾರೆ ಎಂಬ ಸಮರ್ಥನೆ ನ್ಯಾಯ ಸಮ್ಮತವಾದದ್ದಲ್ಲ ಎಂದು ತಿಳಿಸಿ ಉಚ್ಚ ನ್ಯಾಯಾಲಯದ ಮತ್ತು ಶ್ರೇಷ್ಠ ನ್ಯಾಯಾಲಯದ ತೀರ್ಪಿನ ಪ್ರತಿಗಳನ್ನು ಸಲ್ಲಿಸಿ ಪ್ರತಿವಾದಿಗಳ ಆಸ್ತಿಯನ್ನು ಮತ್ತು ಅದರ ಬಾಡಿಗೆಯನ್ನು attach ಮಾಡಬಾರದೆಂದು ತಮ್ಮ ವಾದ ಮಂಡಿಸಿದರು.

ಪ್ರತಿವಾದಿಗಳ ಷೆಡ್ಯೂಲ್ ಆಸ್ತಿಗಳು ವಿಲೇವಾರಿಯಾದಲ್ಲಿ, ಪ್ರತಿವಾದಿಗಳ ವಿರುದ್ಧ ಮಾಡಲ್ಪಡಬಹುದಾದ ಯಾವುದೇ ಆದೇಶ: ಡಿಕ್ರಿಯನ್ನು ನಿಷ್ಕ್ರಿಯಗೊಳಿಸಿದಂತೆ: ವಿಳಂಬಗೊಳಿಸಿದಂತಾಗುತ್ತದೆ ಎಂಬುದು ನನಗೆ ಪೂರ್ತಿಯಾಗಿ ಮನವರಿಕೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ನಂ. ಸಿ.ಎಂ.ಡಬ್ಲ್ಯೂ/123/ಸಿ.ಎಲ್.ಎಂ./2007, ಬೆಂಗಳೂರು, ದಿನಾಂಕ:14.09.2007ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಎಸ್.ಆರ್. ದೇವಪ್ಪ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ನಿಯಮ 441, ದಾವಾ ಪಂಚಾಯಿತಿ ನ್ಯಾಯಾಲಯ, ಅಮಾನತ್ ಹೌಸ್, ಬೆಂಗಳೂರು ಆದ ನಾನು ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರತಿವಾದಿಗಳ ಸ್ಥಿರಾಸ್ತಿಗಳನ್ನು ಮತ್ತು ಸದರಿ ಸ್ಥಿರಾಸ್ತಿಗಳಿಂದ ಬರುವ ಬಾಡಿಗೆಯನ್ನು ಷರತ್ತಿಗೊಳಪಟ್ಟು ಜಪ್ತಿ ಮಾಡಿಕೊಳ್ಳಲು ಆದೇಶ ಪೂರ್ವ ಜಪ್ತಿ ಆದೇಶವನ್ನು ಈ ಮೂಲಕ ಹೊರಡಿಸಿರುತ್ತೇನೆ.

ಪ್ರತಿವಾದಿಗಳು ಮೇಲ್ಕಂಡ ಆದೇಶ ಪೂರ್ವ ಜಪ್ತಿ ಆದೇಶವನ್ನು ತೆರವು ಮಾಡಿಕೊಳ್ಳಲು ಇಚ್ಛಿಸಿದಲ್ಲಿ ಅರ್ಜಿದಾರರ ಬೇಡಿಕೆ ಮೊತ್ತಕ್ಕೆ ಸರಿಸಮವಾಗಿ ಸೂಕ್ತ ಭದ್ರತೆಯನ್ನು ಈ ನ್ಯಾಯಾಲಯಕ್ಕೆ ಒಪ್ಪಿಗೆಯಾಗುವಂತೆ ಅಥವಾ ದಾವಾ ಮೊತ್ತ ರೂ.3,85,00,000/–ಗಳನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು, ನಿಯಮ 441, ದಾವಾ ಪಂಚಾಯಿತಿ ನ್ಯಾಯಾಲಯ, ಅಮಾನತ್ ಹೌಸ್, ಬೆಂಗಳೂರು ಇವರ ಪಿ.ಡಿ. ಖಾತೆಗೆ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ., ಕಲ್ಪತರು ಸೂಪರ್ ಬಜಾರ್, ಭಗವಾನ್ ಮಹಾವೀರ್ ರಸ್ತೆ, ಬೆಂಗಳೂರು ಇದರಲ್ಲಿ ದಿನಾಂಕ:31.05.2009ರೊಳಗೆ ಠೇವಣಿಸಿ ಮೂಲ ಚಲನ್‌ನನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವುದು. ತಪ್ಪಿದಲ್ಲಿ ಈ ಬಗ್ಗೆ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ, ಆದೇಶ ಮುನ್ನಾ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಷೆಡ್ಯೂಲ್‌ನಲ್ಲಿ ಸ್ಥಿರಾಸ್ತಿಗಳನ್ನು ಖರೀದಿಸುವವರು/ ಆಸ್ತಿಗಳನ್ನು ಹೊಂದುವವರು ಈ ಆದೇಶ ಪೂರ್ವ ಜಪ್ತಿ ಆದೇಶಕ್ಕೆ ಒಳಪಟ್ಟು ಮಾಡಿರುತ್ತಾರೆಂದು ತಿಳಿಯುವುದು.

**SCHEDULE**

**I.** 1) Property Schedule Description (SA No.797/09-10)

(LAND MARK) Site No.7, C M C Katha No.144/33/27, Sampigehalli Village, Yelahanka Hobli, BNTQ (Shedule A): Site No.7, C M C Katha No.144/33/27, Sampigehalli Village, Yelahanka Hobli, BNTQ.

Measuring Ew 50 Ft * Ns 30 Ft of Vacant Site (EAST) Private Property (WEST) 30 Ft road (SOUTH) Site No.8 (NORTH) Site No.6.

2) (LAND MARK) Site No.7, C M C Katha No.144/33/2/7, Sampigehalli Village, Yelahanka Hobli, BNTQ

(Schedule A): Site No.7, C M C Katha No.144/33/2/7, Sampigehalli Village, Yelahanka Hobli, BNTQ.

EW 50 ft * NS 30 ft of Vacant site (EAST) Private Property (WEST) 30 ft Road (SOUTH) Site No.8 (NORTH) Site No.6

3) (LAND MARK) Site No.7, Byatarayanapura CMC Katha No.144/33/2/7, Situated at Sampigehalli Village, Yelahanka Hobli, BNTQ (Schedule A): Site No.7, Byatarayanapura C M C Katha No.144/33/2/7, Situated at Sampigehalli Village, Yelahanka Hobli, BNTQ., Measuring EW 50 ft * NS 30 ft, (EAST) Private Property (WEST) 30 ft Road (SOUTH) Site No.8 (NORTH) Site No.6.

**II. Property Schedule Description (SA No.796/09-10)**

(LAND MARK) Site No.8, Byatarayanapura CMC Katha No.144/33/2/8, Situated at Sampigehalli Village, Yelahanka Hobli, BNTQ, (Schedule A): Site No.8, Byatarayanapura CMC Katha No.144/33/2/8, Situated at Sampigehalli Village, Yelahanka Hobli, BNTQ., Measuring EW 50ft * NS 30ft, (EAST) Private Property (WEST) 30 feet Road (SOUTH) site No.9 (NORTH) Site No.7.

**III. Property of Syed Abdul Wahid**

Details of Property: Properties Situated in: K.G. Byadarahalli having Site No. (79/1), Site No.79/1 in Sy No.79/1 situated at K.G. Byadarahalli, (Nandi Durga Road) Ramaiah Reddy Road, 2nd Cross, Benson Town, Bangalore, Measuring: 50x50,

Boundaries:

E-Road

W-Private Property

N- Private Property

S- Private Property

IV. Details of Property: Properties situated in: Brigade Road having Site No.(44 & 45, Unit No.107 to 112 & 112/1, Bangalore)

V. No Documents Registered during 01.04.2004 to 13.12.2007 Properties situated in: Commercial Street having Property No.176, Basement, Bangalore.

E- Private Property

W-Private Property

N- Private Property

S- Road Commercial Street

Measuring: E to W: 40ft

N to S: 60ft

**VI. Property Schedule Description:**

(LAND MARK) The Entire Western Portion of the Upper Ground Floor with Mezzanine Floor and First Floor Premises bearing No.176, and Sub No.176/2, Commercial Street, Bangalore (Schedule A): 2/3rd Undivided share in the land out of entire Property bearing No.176 and 176/1 Measuring all 3189 Sq Ft., The Entire Western Portion of the Upper Ground Floor with Mezzanine Floor and First Floor with the built up area of 3550 Sq Ft of Premises bearing No.176, and Sub No. 176/2, Commercial Street, Bangalore (EAST) Property No.117, Commercial Street (WEST) Property No.175, Commercial Street (SOUTH) Commercial Street (NORTH) Private Property.

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ:28.04.2009 ರಂದು ಹೊರಡಿಸಿದೆ.

**ಎಸ್.ಆರ್. ದೇವಪ್ಪ**
ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441),
ದಾವಾ ಪಂಚಾಯಿತಿ ನ್ಯಾಯಾಲಯ, ಅಮಾನತ್ ಹೌಸ್,
ಶಿವಾಜಿನಗರ, ಬೆಂಗಳೂರು–560001.

ಪಿ.ಡಿ.30

**UNIVERSITY OF AGRICULTURAL SCIENCES, BANGALORE**
**Administrative Office, GKVK, Bangalore-560 065**
**NOTIFICATION**
**No.AO/RSP/332nd Board/ Amendment-C & RR/ 09-2010, Dated:30th May, 2009**

**Sub:** Amendment to the Cadre and Recruitment Regulations of Service Personnel of UAS, Bengaluru.

**Ref:** Minutes of the 332nd Board Meeting held on 14th May 2008, vide Item No.7 and Item No.9.

In exercise of the power conferred under Statute 32 of UAS, Bengaluru and in pursuance of the decision of the Board of Regents referred to above, the following amendments are made to the existing Cadre and Recruitment Regulations of UAS, Bengaluru as detailed below;

They shall come into force form the date of approval of the Board of Regents i.e. 14th May, 2009.

1. The following is added as Sl.No.7, after Sl.No.6 under General in the existing Cadre and Recruitment Regulations of the UAS, Bengaluru.

**General-7**

Written Test shall be conducted to all eligible candidates who apply for various posts of Service Personnel and T-Series under direct recruitment and then will be called for interview in the ratio 1:5 (5 candidates for each notified vacancy) based on the merit list to be prepared by giving 50 percent weightage for marks secured in the prescribed qualification and 50 percent for marks scored in the Written Test.

2. The column (5) and (6) existing under method of recruitments and qualifications for the Cadre of Laboratory Assistant at Sl.No.95 of the Cadre and Recruitment Regulations shall be amended as follows:

**Sl.No.95, Laboratory Assistant**

| **Existing** | | **Amended** | |
|---|---|---|---|
| **Column -5: Method of Recruitment** | **Coloum-6: Qualification** | **Column -5: Method of Recruitment** | **Coloum -6: Qualification** |
| 1/3rd by promotion from among Attenders/ Technician and 1/3rd by Recruitment (Direct) from the Eligible (qualified) in service employees with the University and 1/3rd by direct recruitment.<br>If there are no sufficient candidates from among employees of the University, the shortfall may be filled up by Direct Recruitment. | **For Promotion**<br>Must be working in the University for not less than 5 years as Attenders/ Technicians with SSLC<br>**For Direct Recruitment**<br>Must have passed SSLC with 9 months training course offered by the Department of Agriculture/ 2 years service in the University as Field Assistant/ Laboratory Assistant. | 1/3rd by promotion from among Attenders/ Technician and 1/6th by Recruitment (Direct) from the Eligible (qualified) in service employees within the University and 1/3rd by direct recruitment and 1/6th by promotion from among the in-service LV Drivers who have passed SSLC.<br>If there are no sufficient candidates from among employees of the University, the shortfall may be filled up by Direct Recruitment. | **For Promotion**<br>Must be working in the University for not less than 5 years as Attenders/ Technicians and Drivers (Light Vehicle) with SSLC<br>**For Direct Recruitment**<br>Must have passed SSLC with 9 months training course offered by the Department of Agriculture/ 2 years service in the University as Field Assistant/ Laboratory Assistant. |

By Order
PD-31 Administrative Officer.

## ಕರ್ನಾಟಕ ಲೋಕಸೇವಾ ಆಯೋಗದ ನಡವಳಿಗಳು, ಬೆಂಗಳೂರು

**ವಿಷಯ:** ಕರ್ನಾಟಕ ಲೋಕಸೇವಾ ಆಯೋಗದ ದಿನಾಂಕ: 08–06–2008ರಂದು ನಡೆಸಿದ ಸಹಾಯಕರು/ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ದುರಾಚಾರ ಪ್ರಕರಣಗಳಲ್ಲಿ ಭಾಗಿಯಾಗಿದ್ದ ಅಭ್ಯರ್ಥಿಗಳ ಬಗ್ಗೆ.

**ಓದಲಾಗಿದೆ:**

1. ಶ್ರೀ ಮುರುಘ ರಾಜೇಂದ್ರ ಸ್ವಾಮೀಜಿ ಬಿ.ಎಡ್. ಕಾಲೇಜು, ಗುಲ್ಬರ್ಗಾ, ಈ ಪರೀಕ್ಷಾ ಉಪ ಕೇಂದ್ರದಲ್ಲಿ ನಡೆಸಿದ ಪರೀಕ್ಷೆಯ ಬಗ್ಗೆ ಶ್ರೀ ಓ. ನಾರಾಯಣ, ಸಹಾಯಕ ಕಾರ್ಯದರ್ಶಿ, ಕ.ಲೋ.ಸೇ.ಆ. ಇವರು ನೀಡಿರುವ ಲಿಖಿತ ವರದಿ.
2. ಪ್ರಾಂಶುಪಾಲರು, ಶರಣ ಬಸವೇಶ್ವರ ಕಲಾ ಮತ್ತು ವಾಣಿಜ್ಯ ಕಾಲೇಜು, ಗುಲ್ಬರ್ಗಾ, ಇವರು ದಿ:08–06–2008 ರಂದು ಸಲ್ಲಿಸಿರುವ ವರದಿ.
3. ಕೊಠಡಿ ಮೇಲ್ವಿಚಾರಕರು, ಆರ್.ಸಿ. ಕಾಲೇಜು, ಬೆಂಗಳೂರು, ಇವರು ಸಲ್ಲಿಸಿರುವ ವರದಿ.
4. ಮೇಲ್ವಿಚಾರಕರು, ಜೆ.ಎಸ್.ಎಸ್. ಹೈಸ್ಕೂಲ್, ಧಾರವಾಡ, ಇವರು ದಿ: 08–06–2008ರಂದು ಸಲ್ಲಿಸಿರುವ ವರದಿ.
5. ಮೇಲ್ವಿಚಾರಕರು, ನೂತನ ವಿದ್ಯಾಲಯ, ಕನ್ಯಾ ಪ್ರೌಢ ಶಾಲೆ, ಗುಲ್ಬರ್ಗಾ, ಇವರು ದಿ: 08–06–2008ರಂದು ಸಲ್ಲಿಸಿರುವ ವರದಿ.
6. ಡಿ.ಡಿ.ಪಿ.ಐ. ಗದಗ, ಇವರು ದಿನಾಂಕ:08–06–2008ರಂದು ವಿ.ಡಿ.ಎಸ್.ಟಿ.ಓ. ಬಾಲಕರ ಪದವಿ ಪೂರ್ವ ಕಾಲೇಜು, ಗದಗ, ಇಲ್ಲಿ ನಡೆಸಲಾದ ಪರೀಕ್ಷೆಯ ಬಗ್ಗೆ ನೀಡಿದ ವಿವರ.
7. ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ, ಇವರು ದಿ: 08–06–2008 ರಂದು ಶ್ರೀಮತಿ. ಜಿ.ಎಂ. ಪ್ರೇಮಲೀಲಾ, ಇವರ ಕುರಿತಂತೆ ಸಲ್ಲಿಸಿರುವ ವರದಿ.
8. ಮೇಲ್ವಿಚಾರಕರು, ಎ.ಐ.ಟಿ. ಚಿಕ್ಕಮಗಳೂರು, ಇವರು ದಿ: 08–06–2008ರಂದು ಸಲ್ಲಿಸಿರುವ ವರದಿ.
9. ಈ ಕಛೇರಿಯ ಕಾರಣ ಕೇಳುವ ನೋಟೀಸು ಸಂಖ್ಯೆ: ಇ(2) 110–121/2008–09/ಪಿಎಸ್‌ಸಿ, ದಿ: 24–06–2008.
10. ಈ ಕಛೇರಿಯ ಕಾರಣ ಕೇಳುವ ನೋಟೀಸು ಸಂಖ್ಯೆ: ಇ(2) 132–134/2008–09/ಪಿಎಸ್‌ಸಿ, ದಿ: 02–07–2008.
11. ಈ ಕಛೇರಿಯ ಕಾರಣ ಕೇಳುವ ನೋಟೀಸು ಸಂಖ್ಯೆ: ಇ(2) 80/2008–09/ಪಿಎಸ್‌ಸಿ, ದಿ: 10–06–2008.
12. ಈ ಕಛೇರಿಯ ಕಾರಣ ಕೇಳುವ ನೋಟೀಸು ಸಂಖ್ಯೆ: ಇ(2) 93–94/2008–09/ಪಿಎಸ್‌ಸಿ, ದಿ: 20–06–2008.
13. ಈ ಕಛೇರಿಯ ಕಾರಣ ಕೇಳುವ ನೋಟೀಸು ಸಂಖ್ಯೆ: ಇ(2) 124/2008–09/ಪಿಎಸ್‌ಸಿ, ದಿ: 27–06–2008.
14. ಈ ಕಛೇರಿಯ ಕಾರಣ ಕೇಳುವ ನೋಟೀಸು ಸಂಖ್ಯೆ: ಇ(2) 95/2008–09/ಪಿಎಸ್‌ಸಿ, ದಿ: 20–06–2008.
15. ಈ ಕಛೇರಿಯ ಕಾರಣ ಕೇಳುವ ನೋಟೀಸು ಸಂಖ್ಯೆ: ಇ(2) 329/2008–09/ಪಿಎಸ್‌ಸಿ, ದಿ: 02–08–2008.
16. ಈ ಕಛೇರಿಯ ಕಾರಣ ಕೇಳುವ ನೋಟೀಸು ಸಂಖ್ಯೆ: ಇ(2) 86/2008–09/ಪಿಎಸ್‌ಸಿ, ದಿ: 17–06–2008.
17. ಈ ಕಛೇರಿಯ ಕಾರಣ ಕೇಳುವ ನೋಟೀಸು ಸಂಖ್ಯೆ: ಇ(2) 274/2008–09/ಪಿಎಸ್‌ಸಿ, ದಿ: 21–07–2008.
18. ಶ್ರೀ. ಸಂತೋಷ ಜಿ. ನಾಡಗಿರಿ ಇವರ ದಿ: 07–07–2008ರ ಸಮಜಾಯಿಷಿ.
19. ಶ್ರೀ. ವೀರಭದ್ರಪ್ಪ ಎಸ್. ಅಂಬಲಗಿ ಇವರ ದಿ: 01–07–2008ರ ಸಮಜಾಯಿಷಿ.
20. ಶ್ರೀ. ಚನ್ನಬಸಪ್ಪ ಎನ್. ಕೊಂಬಿನ ಇವರ ದಿ: 05–07–2008ರ ಸಮಜಾಯಿಷಿ.
21. ಶ್ರೀ. ಜಗದೇವರೆಡ್ಡಿ ಜೆ. ಅಂತರೆಡ್ಡಿ ಇವರ ದಿ: 03–06–2008ರ ಸಮಜಾಯಿಷಿ.
22. ಶ್ರೀ. ಸಂತೋಷ ಕುಮಾರ ಇವರ ದಿ: 18–07–2008ರ ಸಮಜಾಯಿಷಿ.
23. ಶ್ರೀ. ಮಹ್ಮದ್ ಮುಸ್ತಾಖ್ ಸೌದಾಗರ್ ಇವರ ದಿ: 07–07–2008ರ ಸಮಜಾಯಿಷಿ.
24. ಶ್ರೀ. ಯಲ್ಲಪ್ಪ ಲಕ್ಷ್ಮಣ್ ಶೇಖರಗೋಳ ಇವರ ದಿ: 28–06–2008ರ ಸಮಜಾಯಿಷಿ.
25. ಶ್ರೀ. ಜಗದೀಶ್ ಎಸ್. ತಳವಾರ ಇವರ ದಿ: 18–08–2008 ಮತ್ತು ದಿ: 28–06–2008ರ ಸಮಜಾಯಿಷಿ.
26. ಶ್ರೀ. ವಸಂತ ಕುಮಾರ್ ಹೆಚ್. ವೀರಾಪುರ ಇವರ ದಿ: 29–07–2008ರ ಸಮಜಾಯಿಷಿ.
27. ಶ್ರೀ. ಸಂಜೀವ ಕುಮಾರ್ ಆರ್. ಕಾಟ್ಕೆ ಇವರ ದಿ: 07–07–2008 ಮತ್ತು ದಿ: 13–08–2008ರ ಸಮಜಾಯಿಷಿ.
28. ಶ್ರೀಮತಿ. ಜಿ.ಎಂ. ಪ್ರೇಮಲೀಲಾ ಇವರ ದಿ: 29–06–2008ರ ಸಮಜಾಯಿಷಿ.
29. ಶ್ರೀ. ಸಾಜೀದ್ ಅಲಿ ಇವರ ದಿ: 19–08–2008ರ ಸಮಜಾಯಿಷಿ
30. ಶ್ರೀ. ಪ್ರಶಾಂತ ರಾಂಪುರೆ ಇವರ ದಿ: 04–07–2008ರ ಸಮಜಾಯಿಷಿ.
31. ದಿನಾಂಕ: 30–07–2008ರಂದು ಸ್ವೀಕೃತಗೊಂಡಿರುವ ಶ್ರೀ. ಪ್ರಭುಶಂಕರ ಟಿ.ಪಿ. ಇವರ ಸಮಜಾಯಿಷಿ.

ಪ್ರಸ್ತಾವನೆ:

ದಿನಾಂಕ: 08–06–2008ರಂದು ನಡೆದ ಸಹಾಯಕರು/ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆ ಸಮಯದಲ್ಲಿ ಒಟ್ಟು 22 ದುರಾಚಾರ ಪ್ರಕರಣಗಳು ವರದಿಯಾಗಿದ್ದು, ಅವುಗಳ ವಿವರ ಈ ಕೆಳಗಿನಂತಿದೆ:

1. ಶ್ರೀ ಮುರುಘ ರಾಜೇಂದ್ರ ಸ್ವಾಮೀಜಿ ಬಿ.ಎಡ್. ಕಾಲೇಜು, ಗುಲ್ಬರ್ಗಾ, ಈ ಪರೀಕ್ಷಾ ಉಪ ಕೇಂದ್ರದಲ್ಲಿನ ಕೊಠಡಿ ಸಂಖ್ಯೆ; 8 ಮತ್ತು 9ರಲ್ಲಿನ ಕೆಲವು ಅಭ್ಯರ್ಥಿಗಳು ನಕಲು ಮಾಡಲು ಅನುಕೂಲ ಮಾಡುತ್ತಿರುವುದಾಗಿ ಹೇಳುತ್ತಾ ಪರೀಕ್ಷೆಯನ್ನು ಬೈಕಾಟ್ ಮಾಡುವುದಾಗಿ ವೀರಭದ್ರಪ್ಪ ಎಸ್. ಅಂಬಲಗಿ (ನೋಂ.ಸಂ. 239884), ಶೈಲೇಶ್ ಕುಮಾರ ಕೆ. ನ್ಯಾಮನ್ (ನೋಂ.ಸಂ. 239894), ವಿಜಯಕುಮಾರ್ (ನೋಂ.ಸಂ. 239922), ಚಿದಾನಂದ ಶಂಕರ ಪಾಟೀಲ್ (ನೋಂ.ಸಂ. 239881), ಸಜೀದ ಅಲಿ (ನೋಂ.ಸಂ. 239899), ಚನ್ನಬಸಪ್ಪ ಎಸ್. ಕೊಂಬಿನ (ನೋಂ.ಸಂ. 239898), ಶಿವಣ್ಣ (ನೋಂ.ಸಂ. 239900), ಸಂತೋಷ ಜಿ. ನಾಡಗಿರಿ (ನೋಂ.ಸಂ. 239896), ಸಿದ್ಧಪ್ಪ ಮಲ್ಲಪ್ಪ ಜಲಕಿ (ನೋಂ.ಸಂ. 239909), ಪ್ರಶಾಂತ ರಾಂಪುರೆ (ನೋಂ.ಸಂ. 239882), ಇವರುಗಳು 11:50ರ ವೇಳೆಗೆ ಅಂದರೆ ಪರೀಕ್ಷೆ ಮುಗಿಯಲು ಇನ್ನು ಹತ್ತು ನಿಮಿಷ ಇರುವಾಗಲೇ ಕೊಠಡಿಯಿಂದ OMR ಉತ್ತರ ಹಾಳೆಗಳನ್ನು ತೆಗೆದುಕೊಂಡು ಹೋಗಿರುವುದಾಗಿ ಓದಲಾದ 1ರ ವರದಿಯಲ್ಲಿ ತಿಳಿಸಲಾಗಿದೆ.
2. ಶ್ರೀ. ಸಂಜೀವ ಕುಮಾರ್ ಆರ್. ಕಾಟ್ಕೆ ನೋಂ.ಸಂ. 235130, ಇವರು ಪರೀಕ್ಷಾ ಸಂದರ್ಭದಲ್ಲಿ ಎರಡು ಮೊಬೈಲ್‌ಗಳನ್ನು ಹೊಂದಿದ್ದು, ಪರೀಕ್ಷೆ ಮುಗಿಯುವ ಮುನ್ನವೇ ಪ್ರಶ್ನೆ ಪತ್ರಿಕೆ ಮತ್ತು OMR ಉತ್ತರ ಹಾಳೆಯೊಂದಿಗೆ ಪರೀಕ್ಷಾ ಕೊಠಡಿಯಿಂದ ಓಡಿ ಹೋಗಿರುವುದಾಗಿ ಹಾಗೂ ಶ್ರೀ. ಮುಸ್ತಾಖ್ ಅಹಮದ್ ನೋಂ.ಸಂ. 235037 ಮತ್ತು ಸಂತೋಷ ಕುಮಾರ್ ನೋಂ.ಸಂ. 235084 ಪರೀಕ್ಷಾ ಸೂಚನೆಗಳನ್ನು ಹಾಗೂ ಕೇಂದ್ರ ಮೇಲ್ವಿಚಾರಕರು ನೀಡಿರುವ ಸೂಚನೆಗಳನ್ನು ಉಲ್ಲಂಘಿಸಿ ಪರೀಕ್ಷಾ ಸಮಯದಲ್ಲಿ ಮೊಬೈಲ್‌ಗಳನ್ನು ಹೊಂದಿರುವುದಾಗಿ ಮೇಲ್ವಿಚಾರಕರಾದ ಎಸ್.ಬಿ. ಕಲಾ ಮತ್ತು ವಾಣಿಜ್ಯ ಕಾಲೇಜು, ಗುಲ್ಬರ್ಗಾ ಇವರು ಓದಲಾದ 2ರಲ್ಲಿ ವರದಿ ಮಾಡಲಾಗಿದೆ.
3. ಬೆಂಗಳೂರಿನ ಆರ್.ಸಿ. ಕಾಲೇಜಿನಲ್ಲಿ ನೋ.ಸಂ. 119840ರ ಅಭ್ಯರ್ಥಿಯಾಗಿದ್ದ ಶ್ರೀಮತಿ. ಸುನಿತಾ ಆರ್.ಜೆ. ಇವರು ಪರೀಕ್ಷೆ ಬರೆಯುತ್ತಿದ್ದ ಸಂದರ್ಭದಲ್ಲಿ ಮೊಬೈಲ್‌ನಿಂದ ಎಸ್.ಎಂ.ಎಸ್ ಮುಖಾಂತರ ಉತ್ತರಗಳನ್ನು ಪಡೆಯುತ್ತಿದ್ದರೆಂದು ಹಾಗೂ ಉತ್ತರಗಳನ್ನು ಗುರುತಿಸಿರುವ ಒಂದು ಹಾಳೆಯನ್ನು ಹೊಂದಿದ್ದರೆಂದು ಆ ಕೊಠಡಿಯಲ್ಲಿ ಪರೀಕ್ಷೆ ಬರೆಯುತ್ತಿದ್ದ ನೋಂ.ಸಂ. 119841 ಮತ್ತು 119825ರ ಅಭ್ಯರ್ಥಿಗಳು ಗಮನಿಸಿ ಪರೀಕ್ಷಾ ಕೊಠಡಿಯ ಸಂವೀಕ್ಷಕರ ಗಮನಕ್ಕೆ ತಂದಿರುವುದಾಗಿ ಓದಲಾದ 3ರಲ್ಲಿ ವರದಿ ಮಾಡಲಾಗಿದೆ.
4. ಧಾರವಾಡ ಕೇಂದ್ರದ ಜೆ.ಎಸ್.ಎಸ್. ಪ್ರೌಢ ಶಾಲೆಯ ಪರೀಕ್ಷಾ ಕೇಂದ್ರದಲ್ಲಿ ಬೆಳಗ್ಗಿನ 10:00 ಗಂಟೆಯ ಸಾಮಾನ್ಯ ಜ್ಞಾನ ವಿಷಯದ ಪ್ರಥಮ ಪರೀಕ್ಷೆಯಲ್ಲಿ ರೂಮ್. ನಂ. 3ರಲ್ಲಿ ಪ್ರಶ್ನೆ ಪುಸ್ತಿಕೆಗಳನ್ನು ಅಭ್ಯರ್ಥಿಗಳಿಗೆ ವಿತರಿಸುವ ಸಂದರ್ಭದಲ್ಲಿ ಅಭ್ಯರ್ಥಿಗಳಾದ ಯಲ್ಲಪ್ಪ ಶೇಖರಗೋಳ (ನೋಂ.ಸಂ. 208207) ಮತ್ತು ಜಗದೀಶ್ ಎಸ್. ತಳವಾರ (ನೋಂ.ಸಂ.208180) ಇವರುಗಳು ಕೊಠಡಿಯ ಸಂವೀಕ್ಷಕರೊಂದಿಗೆ ಅನಾವಶ್ಯಕವಾಗಿ ಅಸಭ್ಯವರ್ತನೆಯಿಂದ ನಡೆದುಕೊಂಡಿದ್ದು, ಅಕ್ಕಪಕ್ಕದ ಅಭ್ಯರ್ಥಿಗಳಿಗೆ ತೊಂದರೆ ಕೊಡುವುದಲ್ಲದೆ ಅಭ್ಯರ್ಥಿಗಳನ್ನು ಪರೀಕ್ಷೆ ಬರೆಯಬಾರದೆಂದು ಪ್ರಚೋದಿಸಿದ್ದು, ಅಲ್ಲದೆ ಇವರು ಪ್ರಶ್ನೆ ಪತ್ರಿಕೆ ಹಾಗೂ OMR ಶೀಟುಗಳನ್ನು ಹೊರಗೆ ತೆಗೆದುಕೊಂಡು ಹೋಗಲು ಯತ್ನಿಸಿದಾಗ ಪೊಲೀಸ್ ಸಹಾಯದಿಂದ ವಶಪಡಿಸಿಕೊಳ್ಳಲಾಯಿತು. ಈ ಸಂದರ್ಭದಲ್ಲಿ ಜೆ.ಎಸ್. ತಳವಾರ ಪೊಲೀಸ್ ಕೈ ತಪ್ಪಿಸಿ ಓಡಿ ಹೋಗಿರುತ್ತಾನೆ. ಇವರಿಂದಾಗಿ ಎಲ್ಲಾ ಕೊಠಡಿಯ ಪರೀಕ್ಷಾ ಅಭ್ಯರ್ಥಿಗಳಿಗೆ ತೊಂದರೆಯಾಯಿತು ಮುಂದೆ ಜಿಲ್ಲಾಧಿಕಾರಿಗಳು ಹಾಗೂ ಪೊಲೀಸ್ ಇಲಾಖೆಯ ಸಹಾಯ ಕೋರಿ ಪರೀಕ್ಷೆಯನ್ನು ಸುಗಮವಾಗಿ ನಡೆಸಲು ಅನುಕೂಲವಾಯಿತು, ಎಂದು ಆ ಶಾಲೆಯ ಮೇಲ್ವಿಚಾರಕರು ಮೇಲೆ ಓದಲಾದ 4ರಲ್ಲಿ ವರದಿ ಮಾಡಿದ್ದಾರೆ.
5. ಗುಲ್ಬರ್ಗಾ ಕೇಂದ್ರ ನೂತನ ವಿದ್ಯಾಲಯ ಕನ್ಯಾ ಪ್ರೌಢಶಾಲೆಯಲ್ಲಿನ ಪರೀಕ್ಷಾ ಮೇಲ್ವಿಚಾರಕರ ಓದಲಾದ 5ರ ವರದಿಯಲ್ಲಿ ನೋಂ.ಸಂ. 236475ರ ಅಭ್ಯರ್ಥಿ ಶ್ರೀ. ಜಗದೇವರೆಡ್ಡಿ ಜೆ. ಅಂತರೆಡ್ಡಿ ಇವರು ಪರೀಕ್ಷಾ ಸೂಚನೆಗಳನ್ನು ಪಾಲಿಸದೆ ಪರೀಕ್ಷಾ ಕೊಠಡಿಯೊಳಗೆ ಮೊಬೈಲ್ ತಂದಿದ್ದ ಕಾರಣ ಇವರ ಉತ್ತರ ಹಾಳೆಯನ್ನು ಮುಟ್ಟುಗೋಲು ಹಾಕಲಾಗಿದೆಯೆಂದು ತಿಳಿಸಿರುತ್ತಾರೆ.
6. ವಿ.ಡಿ.ಎಸ್.ಟಿ.ಓ., ಬಾಲಕರ ಪದವಿ ಪೂರ್ವ ಕಾಲೇಜು, ಗದಗ ಈ ಸಂಸ್ಥೆಯಲ್ಲಿ ನೋಂ.ಸಂ. 249162ರ ಅಭ್ಯರ್ಥಿ ವಸಂತ ಕುಮಾರ್ ಹೆಚ್. ವೀರಾಪುರ ಇವರು ಪರೀಕ್ಷೆಗೆ ಉತ್ತರಿಸುತ್ತಿದ್ದ ಸಮಯದಲ್ಲಿ ಎರಡು ಮೂರು ಬಾರಿ

ಹೊರಗಡೆ ಹೋಗಿ ಒಳಗೆ ಬರುವುದು ಮತ್ತು ಹೊರಗೆ ಹೋಗಿ ಮೊಬೈಲ್ ಉಪಯೋಗಿಸಿ ಪರೀಕ್ಷಾರ್ಥಿಗಳಿಗೆ ಕಿರಿಕಿರಿ ಮಾಡಿರುವುದು ಕಂಡು ಬಂದಿರುವುದಾಗಿ ಓದಲಾದ 6ರಲ್ಲಿ ವರದಿ ಮಾಡಲಾಗಿರುತ್ತದೆ.

7. ಚಿತ್ರದುರ್ಗ ಕೇಂದ್ರದಲ್ಲಿನ ಜೆ.ಎಂ.ಐ.ಟಿ. ಪರೀಕ್ಷಾ ಉಪ ಕೇಂದ್ರದಲ್ಲಿ ನೋಂ.ಸಂ. 197743ರ ಅಭ್ಯರ್ಥಿ ಶ್ರೀಮತಿ. ಜಿ.ಎಂ. ಪ್ರೇಮಲೀಲಾ, ಇವರು ಸಾಮಾನ್ಯ ಜ್ಞಾನ ಪತ್ರಿಕೆಗೆ ಸಂಬಂಧಿಸಿದಂತೆ 11.45ರ ಸಮಯದಲ್ಲಿ ನಕಲು ಮಾಡುತ್ತಿದ್ದುದನ್ನು ಕೊಠಡಿಯ ಮೇಲ್ವಿಚಾರಕರಾದ ಶ್ರೀ ಕೆ.ಕೆ ಗುರುರಾಜ್ ಇವರು ಪತ್ತೆ ಹಚ್ಚಿ ನಕಲು ಮಾಡಲು ತಂದಿದ್ದ ಚೀಟಿಯನ್ನು ಹಾಗೂ OMR ಶೀಟ್ ಹಾಗೂ ಪ್ರಶ್ನೆ ಪತ್ರಿಕೆಯನ್ನು ಸದರಿಯವರಿಂದ ತೆಗೆದುಕೊಂಡು ನಕಲು ಮಾಡುತ್ತಿದ್ದ ಬಗ್ಗೆ ಲಿಖಿತ ಹೇಳಿಕೆ ಪಡೆದು ಅಧೀಕ್ಷಕರಿಗೆ ನೀಡಿದ್ದರೆಂದು ದಿನಾಂಕ: 08-06-2008ರಂದು ಆಯೋಗಕ್ಕೆ ನೀಡಲಾದ ಫ್ಯಾಕ್ಸ್ ನಲ್ಲಿ ಬಂದಿರುವುದಾಗಿ ಓದಲಾದ 7ರಲ್ಲಿ ವರದಿ ಮಾಡಲಾಗಿರುತ್ತದೆ.

8. ಮೇಲೆ ಓದಲಾದ 8ರ ವರದಿಯಲ್ಲಿ ನೋಂ. ಸಂ. 193198ರ ಅಭ್ಯರ್ಥಿ ಶ್ರೀ. ಪ್ರಭುಶಂಕರ ಟಿ.ಪಿ. ಇವರು ಪರೀಕ್ಷೆ ನಡೆಯುತ್ತಿದ್ದ ಸಮಯದಲ್ಲಿ ತಾವು ಉತ್ತರಿಸುತ್ತಿದ್ದ OMR ಹಾಳೆಯಲ್ಲಿ ಬಿಳಿ ಶಾಹಿಯನ್ನು ಉಪಯೋಗಿಸಿ ನೋಂದಣಿ ಸಂಖ್ಯೆಯನ್ನು 193619 ಎಂದು ಮತ್ತು ಸಹಿಯನ್ನು ಸಹ ಬದಲಿಸಿರುವುದಾಗಿ ಮೇಲ್ವಿಚಾರಕರು, ಎ.ಐ.ಟಿ ಚಿಕ್ಕಮಗಳೂರು, ಇವರು ತಿಳಿಸಿರುತ್ತಾರೆ.

ಈ ಮೇಲ್ಕಂಡ ಪ್ರಕರಣಗಳಿಗೆ ಸಂಬಂಧಪಟ್ಟ ಅಭ್ಯರ್ಥಿಗಳಿಗೆ ಓದಲಾದ 9 ರಿಂದ 17ರ ಕಾರಣ ಕೇಳುವ ನೋಟೀಸುಗಳನ್ನು ಜಾರಿ ಮಾಡಲಾಗಿದ್ದು, ಶ್ರೀ. ಸಂತೋಷ ಗಿರಿಮಲ್ಲಪ್ಪ ನಾಡಗಿರಿ, ಶ್ರೀ. ವೀರಭದ್ರ ಸುಭಾಷ್‌ಚಂದ್ರ ಅಂಬಲಗಿ, ಶ್ರೀ. ಚನ್ನಬಸಪ್ಪ ಎನ್. ಕೊಂಬಿನ, ಶ್ರೀ. ಜಗದೇವ ರೆಡ್ಡಿ ಜೆ. ಅಂತರೆಡ್ಡಿ, ಶ್ರೀ ಸಂತೋಷ ಕುಮಾರ್ ಮತ್ತು ಶ್ರೀ ಮಹಮ್ಮದ್ ಮುಸ್ತಾಖ್ ಅಹ್ಮದ್ ಇವರು ಲಿಖಿತ ಸಮಜಾಯಿಷಿಗಳನ್ನು ಸಲ್ಲಿಸಿ ತಮ್ಮ ತಪ್ಪನ್ನು ಒಪ್ಪಿಕೊಂಡು ಕ್ಷಮೆಯನ್ನು ಕೋರಿರುತ್ತಾರೆ.

ಶ್ರೀ. ಶೈಲೇಶ್ ಕುಮಾರ್ ಕೆ ನ್ಯಾಮನ್, ಶ್ರೀ. ವಿಜಯಕುಮಾರ್, ಶ್ರೀ. ಚಿದಾನಂದ ಶಂಕರ ಪಾಟೀಲ್, ಶ್ರೀ. ಶಿವಣ್ಣ, ಶ್ರೀ. ಸಿದ್ದಮಲ್ಲಪ್ಪ ಜಲಕಿ ಮತ್ತು ಶ್ರೀಮತಿ. ಸುನಿತಾ ಆರ್.ಜೆ. ಇವರು ಆಯೋಗವು ಜಾರಿಗೊಳಿಸಿದ ನೋಟಿಸುಗಳಿಗೆ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

ಶ್ರೀ. ಯಲ್ಲಪ್ಪ ಲಕ್ಷ್ಮಣ ಶೇಖರಗೋಳ, ಶ್ರೀ. ಜಗದೀಶ್ ಎಸ್. ತಳವಾರ, ಶ್ರೀ. ವಸಂತಕುಮಾರ .ಹೆಚ್. ವೀರಾಪುರ, ಶ್ರೀ. ಸಂಜೀವ ಕುಮಾರ, ಶ್ರೀಮತಿ. ಪ್ರೇಮಲೀಲಾ ಜಿ.ಎಂ, ಶ್ರೀ ಸಾಜೀದ್ ಅಲಿ, ಶ್ರೀ. ಪ್ರಶಾಂತ ರಾಂಪೂರೆ ಮತ್ತು ಶ್ರೀ. ಟಿ.ಪಿ ಪ್ರಭುಶಂಕರ್ ಇವರುಗಳು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದ ಕಾರಣ ಇವರ ಆಪಾದನೆಗಳ ವಿರುದ್ಧ ವಿಚಾರಣೆಯನ್ನು ನಡೆಸಲಾಗಿದ್ದು, ಆರೋಪಗಳು ಸಾಬೀತಾಗಿರುತ್ತವೆಯೆಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ.
ಮೇಲ್ಕಂಡ ಎಲ್ಲಾ ಅಂಶಗಳನ್ನು ಹಾಗೂ ಸಂಬಂಧಪಟ್ಟ ದಾಖಲೆಗಳನ್ನು ಪರಿಗಣಿಸಿ ಆಯೋಗವು 20 ಅಭ್ಯರ್ಥಿಗಳ ವಿರುದ್ಧ ಸೂಕ್ತ ದಂಡನೆಯನ್ನು ವಿಧಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಇ(2)3149/2008-09/ಪಿಎಸ್‌ಸಿ, ದಿನಾಂಕ:28ನೇ ಮಾರ್ಚ್, 2009**

ಕರ್ನಾಟಕ ನಾಗರೀಕ ಸೇವೆ (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು 1978 ಹಾಗೂ ಅದಕ್ಕೆ ಸಂಬಂಧಿಸಿದಂತೆ ಆಯೋಗದ ಅಧಿಕೃತ ಜ್ಞಾಪನದ ಸಂಖ್ಯೆ: ಆಡಳಿತ 398/93-94/ಪಿಎಸ್‌ಸಿ, ದಿನಾಂಕ: 14-07-1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಆಪಾದಿತ ಅಭ್ಯರ್ಥಿಗಳಾದ ಶ್ರೀ. ವೀರಭದ್ರ ಸುಭಾಷ್‌ಚಂದ್ರ ಅಂಬಲಗಿ (ನೋಂ.ಸಂ.239884) ಶ್ರೀ. ಚನ್ನಬಸಪ್ಪ ಎನ್. ಕೊಂಬಿನ (ನೋಂ.ಸಂ.239898) ಶ್ರೀ. ಜಗದೇವ ರೆಡ್ಡಿ ಜೆ. ಅಂತರೆಡ್ಡಿ (ನೋಂ.ಸಂ.236475) ಶ್ರೀ ಸಂತೋಷ ಕುಮಾರ್ (ನೋಂ.ಸಂ.235084) ಶ್ರೀ ಮಹಮ್ಮದ್ ಮುಸ್ತಾಖ್ ಅಹ್ಮದ್ (ನೋಂ.ಸಂ.235037) ಶ್ರೀ. ಶೈಲೇಶ್ ಕುಮಾರ್ ಕೆ. ನ್ಯಾಮನ್ (ನೋಂ.ಸಂ.239894) ಶ್ರೀ. ವಿಜಯಕುಮಾರ್ (ನೋಂ.ಸಂ.239922) ಶ್ರೀ. ಚಿದಾನಂದ ಶಂಕರ ಪಾಟೀಲ್ (ನೋಂ.ಸಂ.239881) ಶ್ರೀ. ಶಿವಣ್ಣ (ನೋಂ.ಸಂ.239900) ಶ್ರೀ. ಸಿದ್ದಮಲ್ಲಪ್ಪ ಜಲಕಿ (ನೋಂ.ಸಂ.239909) ಶ್ರೀ. ಯಲ್ಲಪ್ಪ ಲಕ್ಷ್ಮಣ ಶೇಖರಗೋಳ (ನೋಂ.ಸಂ.208207) ಶ್ರೀ. ಜಗದೀಶ್ ಎಸ್. ತಳವಾರ (ನೋಂ.ಸಂ.208180) ಶ್ರೀ. ವಸಂತಕುಮಾರ .ಹೆಚ್. ವೀರಾಪುರ (ನೋಂ.ಸಂ. 249162) ಶ್ರೀ. ಸಂಜೀವ ಕುಮಾರ ಆರ್. ಕಾಟ್ಕೆ (ನೋಂ.ಸಂ. 235130) ಶ್ರೀಮತಿ. ಪ್ರೇಮಲೀಲಾ ಜಿ.ಎಂ (ನೋಂ.ಸಂ.197743) ಶ್ರೀ. ಸಾಜೀದ್ ಅಲಿ (ನೋಂ.ಸಂ. 239899) ಶ್ರೀ. ಪ್ರಶಾಂತ ರಾಂಪೂರೆ (ನೋಂ.ಸಂ. 239882) ಶ್ರೀ. ಸಂತೋಷ .ಜಿ. ನಾಡಗಿರಿ (ನೋಂ.ಸಂ. 239896) ಶ್ರೀ. ಟಿ.ಪಿ ಪ್ರಭುಶಂಕರ್ (ನೋಂ.ಸಂ.193198) ರವರುಗಳಿಗೆ ದಿನಾಂಕ:08-06-2008 ರಂದು ಆಯೋಗವು ನಡೆಸಿದ ಸಹಾಯಕರು/ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯಿಂದ ಡಿಬಾರ್ ಮಾಡುವ ಹಾಗೂ ಶ್ರೀಮತಿ. ಸುನಿತಾ ಆರ್.ಜೆ. (ನೋ.ಸಂ.119840) ಇವರನ್ನು ದಿನಾಂಕ: 08-06-2008ರಂದು ಆಯೋಗವು ನಡೆಸಿದ ಸಹಾಯಕರು/ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯಿಂದ ಡಿಬಾರ್ ಮಾಡುವುದಲ್ಲದೆ ಆಯೋಗವು

ಇನ್ನೂ ಮುಂದೆ ನಡೆಸುವ ಎಲ್ಲಾ ನೇಮಕಾತಿ, ಸ್ಪರ್ಧಾತ್ಮಕ ಪರೀಕ್ಷೆಯ ಮುಖಾಂತರ ನಡೆಸಲಾಗುವ ನೇಮಕಾತಿಗಳಿಗೆ ಹಾಜರಾಗದಂತೆ ಡಿಬಾರ್ ಮಾಡುವ ದಂಡನೆಯನ್ನು ಈ ಮೂಲಕ ವಿಧಿಸಿದೆ.

ಆಯೋಗದ ಆದೇಶದ ಮೇರೆಗೆ,

**ವಿ.ಬಿ.ಪಾಟೀಲ್**

ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ.

**ಕರ್ನಾಟಕ ಲೋಕಸೇವಾ ಆಯೋಗದ ನಡವಳಿಗಳು, ಬೆಂಗಳೂರು**

**ವಿಷಯ:** ಕರ್ನಾಟಕ ಲೋಕಸೇವಾ ಆಯೋಗದ ದಿನಾಂಕ: 08–06–2008ರಂದು ನಡೆಸಿದ ಸಹಾಯಕರು/ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ದುರಾಚಾರ ಪ್ರಕರಣಗಳಲ್ಲಿ ಭಾಗಿಯಾಗಿದ್ದ ಅಭ್ಯರ್ಥಿಗಳ ಬಗ್ಗೆ.

**ಓದಲಾಗಿದೆ:**

1. ಶ್ರೀ ಮುರುಘ ರಾಜೇಂದ್ರ ಸ್ವಾಮೀಜಿ ಬಿ.ಎಡ್. ಕಾಲೇಜು, ಗುಲ್ಬರ್ಗಾ, ಈ ಪರೀಕ್ಷಾ ಉಪ ಕೇಂದ್ರದಲ್ಲಿ ನಡೆಸಿದ ಪರೀಕ್ಷೆಯ ಬಗ್ಗೆ ಶ್ರೀ ಓ. ನಾರಾಯಣ, ಸಹಾಯಕ ಕಾರ್ಯದರ್ಶಿ, ಕ.ಲೋ.ಸೇ.ಆ. ಇವರು ನೀಡಿರುವ ಲಿಖಿತ ವರದಿ.
2. ಈ ಕಛೇರಿಯ ಕಾರಣ ಕೇಳುವ ನೋಟೀಸು ಸಂಖ್ಯೆ:ಇ(2)110–121/2008–09/ಪಿಎಸ್‌ಸಿ, ದಿ:24.06.2008.
3. ಶ್ರೀ ರಾಜೇಂದ್ರ ಎಂ. ಚವ್ಹಾಣ, ಇವರ ದಿನಾಂಕ: 05.07.2008 ಸಮಜಾಯಿಷಿ.
4. ಶ್ರೀ ವಿಶ್ವನಾಥ ಕಲ್ಲಪ್ಪ, ಇವರ ದಿನಾಂಕ: 28.06.2008ರ ಸಮಜಾಯಿಷಿ.

**ಪ್ರಸ್ತಾವನೆ:**

ದಿನಾಂಕ: 08–06–2008ರಂದು ನಡೆದ ಸಹಾಯಕರು/ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆ ಸಮಯದಲ್ಲಿ ದುರಾಚಾರ ಪ್ರಕರಣಗಳು ವರದಿಯಾಗಿದ್ದು, ಅವುಗಳ ವಿವರ ಈ ಕೆಳಗಿನಂತಿದೆ:–

1. ಶ್ರೀ ಮುರುಘ ರಾಜೇಂದ್ರ ಸ್ವಾಮೀಜಿ ಬಿ.ಎಡ್. ಕಾಲೇಜು, ಗುಲ್ಬರ್ಗಾ, ಈ ಪರೀಕ್ಷಾ ಉಪ ಕೇಂದ್ರದಲ್ಲಿನ ಕೊಠಡಿ ಸಂಖ್ಯೆ: 8 ಮತ್ತು 9ರಲ್ಲಿನ ಕೆಲವು ಅಭ್ಯರ್ಥಿಗಳು ನಕಲು ಮಾಡಲು ಅನುಕೂಲ ಮಾಡುತ್ತಿರುವುದಾಗಿ ಹೇಳುತ್ತಾ ಪರೀಕ್ಷೆಯನ್ನು ಬೈಕಾಟ್ ಮಾಡುವುದಾಗಿ ಶ್ರೀ. ರಾಜೇಂದ್ರ ಎಂ. ಚವ್ಹಾಣ (ನೋಂ.ಸಂ 239893) ಶ್ರೀ. ವಿಶ್ವನಾಥ ಕಲ್ಲಪ್ಪ (ನೋಂ.ಸಂ. 239887) ಇವರುಗಳು 11:50ರ ವೇಳೆಗೆ ಅಂದರೆ ಪರೀಕ್ಷೆ ಮುಗಿಯಲು ಇನ್ನು ಹತ್ತು ನಿಮಿಷ ಇರುವಾಗಲೇ ಕೊಠಡಿಯಿಂದ OMR ಉತ್ತರ ಹಾಳೆಗಳನ್ನು ತೆಗೆದುಕೊಂಡು ಹೋಗಿರುವುದಾಗಿ ಓದಲಾದ 1ರ ವರದಿಯಲ್ಲಿ ತಿಳಿಸಲಾಗಿದೆ.

ಈ ಮೇಲ್ಕಂಡ ಪ್ರಕರಣಗಳಿಗೆ ಸಂಬಂಧಪಟ್ಟ ಅಭ್ಯರ್ಥಿಗಳಿಗೆ ಓದಲಾದ 2ರಲ್ಲಿ ಕಾರಣ ಕೇಳುವ ನೋಟೀಸುಗಳನ್ನು ಜಾರಿ ಮಾಡಲಾಗಿದ್ದು, ಶ್ರೀ. ರಾಜೇಂದ್ರ ಎಂ. ಚವ್ಹಾಣ (ನೋಂ.ಸಂ 239893) ಶ್ರೀ. ವಿಶ್ವನಾಥ ಕಲ್ಲಪ್ಪ (ನೋಂ.ಸಂ. 239887) ಇವರು ಆಯೋಗವು ಜಾರಿಗೊಳಿಸಿದ ನೋಟಿಸುಗಳಿಗೆ ಸಮಜಾಯಿಷಿಯನ್ನು ಓದಲಾದ 3 ಮತ್ತು 4ರಲ್ಲಿ ನೀಡಿರುತ್ತಾರೆ.

ಶ್ರೀ. ರಾಜೇಂದ್ರ ಎಂ. ಚವ್ಹಾಣ (ನೋಂ.ಸಂ 239893) ಶ್ರೀ. ವಿಶ್ವನಾಥ ಕಲ್ಲಪ್ಪ (ನೋಂ.ಸಂ. 239887)ಇವರುಗಳು ತಮ್ಮ ಮೇಲಿನ ಆರೋಪಗಳನ್ನು ಲಿಖಿತ ಸಮಜಾಯಿಷಿಗಳಲ್ಲಿ ನಿರಾಕರಿಸಿದ್ದ ಕಾರಣ ಇವರ ಆಪಾದನೆಗಳ ವಿರುದ್ಧ ವಿಚಾರಣೆಯನ್ನು ನಡೆಸಲಾಗಿದ್ದು, ಇವರ ಮೇಲಿನ ಆರೋಪಗಳು ಸಾಬೀತಾಗಿರುವುದಿಲ್ಲ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಹಾಗೂ ಸಂಬಂಧಪಟ್ಟ ದಾಖಲೆಗಳನ್ನು ಪರಿಗಣಿಸಿ ಆಯೋಗವು 02 ಅಭ್ಯರ್ಥಿಗಳ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಇ(2)3150/2008–09/ಪಿಎಸ್‌ಸಿ, ದಿನಾಂಕ:28ನೇ ಮಾರ್ಚ್, 2009**

ಆಯೋಗವು ದಿನಾಂಕ:08–06–2008 ರಂದು ನಡೆಸಿರುವ ಸಹಾಯಕರು/ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ನೇಮಕಾತಿಯ ಸ್ಪರ್ಧಾತ್ಮಕ ಪರೀಕ್ಷೆಯ ಅಭ್ಯರ್ಥಿಗಳಾದ ಶ್ರೀ. ರಾಜೇಂದ್ರ ಎಂ. ಚವ್ಹಾಣ (ನೋಂ.ಸಂ 239893) ಮತ್ತು ಶ್ರೀ. ವಿಶ್ವನಾಥ ಕಲ್ಲಪ್ಪ (ನೋಂ.ಸಂ. 239887) ಇವರ ಮೇಲಿನ ಆಪಾದನೆಗಳು ಸಾಬೀತಾಗಿಲ್ಲದಿರುವುದರಿಂದ ಇವರನ್ನು ಆರೋಪ ಮುಕ್ತರನ್ನಾಗಿಸಿ ಆದೇಶಿಸಿದೆ.

ಆಯೋಗದ ಆದೇಶದ ಮೇರೆಗೆ,

ಪಿ.ಆರ್.306

**ವಿ.ಬಿ.ಪಾಟೀಲ್**

ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ.